# ಎಂ. ಪಿ. ಪಾಟೀಲರ ಸಾಹಿತ್ಯ ಮತ್ತು ಸಂಶೋಧನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧನ ವಿದ್ಯಾರ್ಥಿ :

ಮಲ್ಲಪ್ಪ ಶಂ. ಖರಾಡಿ

ಮಾರ್ಗದರ್ಶಕರು :

ಡಾ. ವ್ಹಿ. ಎಸ್. ಮಾಳಿ

ನಿರ್ದೇಶಕರು

ಬಿ.ಆರ್.ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ

ಕನ್ನಡ ವಿಭಾಗ

ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ,

ಹಾರೂಗೇರಿ. ತಾ. ರಾಯಬಾಗ






ಸಾಹಿತ್ಯ ಅಧ್ಯಯನ ವಿಭಾಗ

ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.

ವಿದ್ಯಾರಣ್ಯ - ೫೮೩ ೨೭೬

೨೦೧೧




# ಎಂ. ಪಿ. ಪಾಟೀಲರ ಸಾಹಿತ್ಯ ಮತ್ತು ಸಂಶೋಧನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ನಿಬಂಧ)


ಸಂಶೋಧನ ವಿದ್ಯಾರ್ಥಿ :

**ಮಲ್ಲಪ್ಪ ಶಂ. ಖರಾಡಿ**

ಮಾರ್ಗದರ್ಶಕರು :

**ಡಾ. ವ್ಹಿ. ಎಸ್. ಮಾಳಿ**

ನಿರ್ದೇಶಕರು

ಬಿ.ಆರ್.ದರೂರ ಸಂಶೋಧನಾ ಕೇಂದ್ರ

ಹಾರೂಗೇರಿ





ಕನ್ನಡ ವಿಭಾಗ

**ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ,**

**ಹಾರೂಗೇರಿ.** ತಾ. ರಾಯಬಾಗ






ಸಾಹಿತ್ಯ ಅಧ್ಯಯನ ವಿಭಾಗ

**ಸಂಯೋಜನೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ.**

ವಿದ್ಯಾರಣ್ಯ – ೫೮೩ ೨೭೬

**೨೦೧೧**

# ಪ್ರಮಾಣ ಪತ್ರ

**ಎಂ. ಪಿ. ಪಾಟೀಲರ ಸಾಹಿತ್ಯ ಮತ್ತು ಸಂಶೋಧನೆ:** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ಡಾ. ವ್ಹಿ. ಎಸ್. ಮಾಳಿ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ, ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಈ ಮೊದಲು ಇದನ್ನು ಇಡಿಯಾಗಿ ಇಲ್ಲವೆ ಬಿಡಿಯಾಗಿ ಪ್ರಕಟಿಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ
ದಿನಾಂಕ : ೧೦-೬-೧೧

**ಮಲ್ಲಪ್ಪ ಶಂ ಖರಾಡಿ**
ಸಂಶೋಧನ ವಿದ್ಯಾರ್ಥಿ
ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ.

# ದೃಢೀಕರಣ ಪತ್ರ

ಮಲ್ಲಪ್ಪ ಶಂಕರ ಖರಾಡಿ ಇವರು **ಎಂ. ಪಿ. ಪಾಟೀಲರ ಸಾಹಿತ್ಯ ಮತ್ತು ಸಂಶೋಧನೆ** ಎಂಬ ಶೀರ್ಷಿಕೆಯ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಾಹಿತ್ಯ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲ ಮತ್ತು ಇದು ಈ ಮೊದಲು ಎಲ್ಲಿಯೂ ಇಡಿಯಾಗಿಯಾಗಲಿ ಬಿಡಿಯಾಗಿಯಾಗಲಿ ಪ್ರಕಟವಾಗಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೧೦-೬-೧೧

**ಡಾ.ವ್ಹಿ.ಎಸ್.ಮಾಳಿ**

ಮಾರ್ಗದರ್ಶಕರು,
ನಿರ್ದೇಶಕರು
ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರ,
ಹಾರೂಗೇರಿ.

ಅಧ್ಯಾಯ ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಒಂದು ದೇಶದ, ನಾಡಿನ ಸಾಂಸ್ಕೃತಿಕ ಸಾಮಾಜಿಕ ಪರಂಪರೆಯನ್ನು ಗುರುತಿಸುವಲ್ಲಿ ಸಾಹಿತ್ಯದ ಪಾತ್ರ ಅನನ್ಯವಾಗಿದೆ. ಅದಕ್ಕೆ ಕನ್ನಡ ಸಾಹಿತ್ಯವು ಹೊರತಾಗಿರುವುದಿಲ್ಲ. ಕವಿ ಆಂಡಯ್ಯ ವರ್ಣಿಸಿರುವಂತೆ ಕಬ್ಬಿಗರ ಬಿಡಾದ ಕರ್ನಾಟಕವು, ಶಕ್ತಿಶಾರದೆಯ ತಾನವಾಗಿ ನಿರಂತರ ಸಾಹಿತ್ಯ ಸುಧೆಯನ್ನು ಹರಿಸುತ್ತ ಬಂದಿದೆ. ಕಾವ್ಯ, ಸಂಗೀತ, ವಿಮರ್ಶೆ, ಸಂಶೋಧನೆ ಮುಂತಾದ ಕ್ಷೇತ್ರಗಳಲ್ಲಿ ತನ್ನ ವಿಸ್ತಾರತೆಯಮ್ನ ಚಾಚಿಕೊಂಡಿದೆ. ನಡುನಾಡೆ ಇರಲಿ, ಗಡಿನಾಡೆ ಇರಲಿ ಕನ್ನಡದ ನಂದಾದೀಪವನ್ನು ಬೆಳಗಿಸುತ್ತ ಮುನ್ನುಗ್ಗುತ್ತಿದೆ. ಕನ್ನಡ ಸಾಹಿತ್ಯವು ತನ್ನ ವ್ಯಾಪ್ತಿ ಹಿರಿಮೆಯನ್ನು ಹೆಚ್ಚಿಸಿಕೊಳ್ಳುವಲ್ಲಿ ಹಲವಾರು ಸಾಹಿತಿ, ವಿದ್ವಾಂಸರು, ಪ್ರಮುಖ ಪಾತ್ರ ವಹಿಸಿರುತ್ತಾರೆ. ಹೆಸರಿಸಲು ಅಸದಳವಾದ ಸಾಧಕರ ದಂಡವೇ ನಿರ್ಮಾಣವಾಗಿದೆ. ಕನ್ನಡ ಸಾಹಿತ್ಯದ ಸೇವೆ ಅಪಾರ, ಅನಂತವಾಗಿದೆ.

ಬೆಳಗಾವಿ ಜಿಲ್ಲೆಯು ಸಾಹಿತ್ಯಿಕವಾಗಿ ಸಾಕಷ್ಟು ಪ್ರಸಿದ್ಧಿಯನ್ನು ಹೊಂದಿರುತ್ತದೆ. ಸಾಹಿತ್ಯ ಸರಸ್ವತಿಯ ತೇರನ್ನು ಎಳೆಯುವಲ್ಲಿ ಬೆಳಗಾವಿ ಜಿಲ್ಲೆಯ ಪಾತ್ರ ಪ್ರಮುಖವಾದುದು. ಈ ನಿಟ್ಟಿನಲ್ಲಿ ಬೆಳಗಾವಿ ಜಿಲ್ಲೆಯು ಸಾಕಷ್ಟು ಕವಿ, ಲೇಖಕ, ವಿಮರ್ಶಕ, ಸಂಶೋಧಕರನ್ನು ನಾಡಿಗೆ ಕಾಣಿಕೆಯಾಗಿ ನೀಡಿರುತ್ತದೆ. ಅವರೆಂದರೆ ಬಿ. ಕೆ. ಖಡಬಡಿ, ಎಸ್. ಡಿ. ಇಂಚಲ, ಫ್ಹ. ಎಂ. ಇನಾಮದಾರ, ಡಾ. ಚಂದ್ರಶೇಖರ ಕಂಬಾರ, ಡಾ. ಎಸ್. ವಾಯ್. ಹಂಜಿ, ಡಾ. ಗುರುಪಾದ ಎಸ್. ಮರಿಗುದ್ದಿ, ಡಾ. ವ್ಹಿ. ಎಸ್. ಮಾಳಿ, ಡಾ. ರಾಜಶೇಖರ ಇಚ್ಚಂಗಿ ಪ್ರಮುಖರಾಗಿದ್ದಾರೆ. ಇಂಥ ಸಾಹಿತಿಗಳ ಸಾಧನೆಯ ಪೂರ್ಣ ಪ್ರಮಾಣದ ಸಾಲಿನಲ್ಲಿ ಹೊಳೆಯುವ ಮತ್ತೊಂದು ನಕ್ಷತ್ರ ಶ್ರೀಯುತ ಎಂ. ಪಿ. ಪಾಟೀಲರು.

ಸಾಹಿತ್ಯ, ರಾಜಕೀಯ, ಶಿಕ್ಷಣ, ಸ್ವಾತಂತ್ರ್ಯ ಹೋರಾಟ, ಎಂಬ ಚತುರ್ಮುಖ ವ್ಯಕ್ತಿತ್ವದ ಹಿನ್ನೆಲೆಯುಳ್ಳ ಎಂ. ಪಿ. ಪಾಟೀಲರು ಚಿಕ್ಕವರಿರುವಾಗಲೇ ತಂದೆ-ತಾಯಿಗಳನ್ನು ಕಳೆದುಕೊಳ್ಳುತ್ತಾರೆ. ಬಡತನದಲ್ಲಿಯೇ ಶಿಕ್ಷಣ ಪೂರೈಸಿ ಜೀವನದಲ್ಲಿ ಉನ್ನತ ಹುದ್ದೆಗಳನ್ನು ಅಲಂಕರಿಸುತ್ತಾರೆ. ರಾಜಕೀಯ ರಂಗದಲ್ಲಿ ಧುಮುಕಿ ಜನಪ್ರಿಯ ಕಾರ್ಯಗಳನ್ನು ಕೈಗೊಳ್ಳುವದರ ಮೂಲಕ ಪ್ರಸಿದ್ಧಿ ಹೊಂದಿರುತ್ತಾರೆ. ರಾಜಕೀಯದಿಂದ ನಿವೃತ್ತಿಹೊಂದಿ ತಮ್ಮ ಜೀವಿತಾವಧಿಯ ಕೊನೆಯ ದಿನಗಳನ್ನು ಸಂಶೋಧನೆಗೆ ಮೀಸಲಿಡುತ್ತಾರೆ. ಇಂತಹ ಅಪರೂಪದ ಹಿನ್ನಲೆಯುಳ್ಳ ವ್ಯಕ್ತಿಯಾದ

ಎಂ. ಪಿ. ಪಾಟೀಲರು ಮಾಡಿದ ಸಾಧನೆಯನ್ನು ಗುರುತಿಸುವ ಕಾರ್ಯವನ್ನು ಈ ನಿಬಂಧದಲ್ಲಿ ಮಾಡಲಾಗಿಡೆ.

**ಉದ್ದೇಶ:**

ಎಂ. ಪಿ. ಪಾಟೀಲರು ಸಂಶೋಧನೆಗೆ ಕೈಕೊಂಡ ವಿಷಯಗಳು ಐತಿಹಾಸಿಕ ಘಟನೆಗಳಾಗಿರುತ್ತವೆ. ಅವುಗಳು ಇಲ್ಲಿಯವರೆಗೆ ಹೇಗೆ ಮತ್ತು ಯಾವ ರೀತಿ ಅಧ್ಯಯನಕ್ಕೆ ಒಳಪಟ್ಟಿರುತ್ತವೆ ಎಂಬುದನ್ನು ಪರಿಶೀಲಿಸಿ ಆ ವಿಷಯಗಳ ಕುರಿತು ಸತ್ಯವಾದ ನಿಲುವುಗಳನ್ನು ತಮ್ಮ ಸಂಶೋಧನೆಯಲ್ಲಿ ಪ್ರಕಟಿಸಿದ್ದಾರೆ.

ಇತಿಹಾಸ ಪುಟಗಳಲ್ಲಿ ವಿಶ್ವಮಾನವನೆಂದು ಜಗತ್‌ಪ್ರಸಿದ್ಧಿಯನ್ನು ಪಡೆದ ಬಸವಣ್ಣನವರ ಜೀವನ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದ್ದಾರೆ. ಬಸವಣ್ಣನವರ ಬಗೆಗೆ ತಪ್ಪು ಭಾವನೆಯನ್ನು ಹೊಂದಿರುವ ಮರಾಠಿ ಭಾಷೆಯ ವಿದ್ವಾಂಸರಲ್ಲಿಯ ತಪ್ಪು ಅಭಿಪ್ರಾಯಗಳನ್ನು ಗುರುತಿಸಿದ್ದಾರೆ. ಆ ನಿಟ್ಟಿನಲ್ಲಿ ಬಸವಣ್ಣನವರ ಜೀವನ ಚರಿತ್ರೆಯ ಬಗೆಗೆ ಆಕರಗಳನ್ನು ಸಂಗ್ರಹಿಸಿರುತ್ತಾರೆ. ಬಸವಣ್ಣನವರ ವ್ಯಕ್ತಿತ್ವವನ್ನು ಗುರುತಿಸಿ ಇತರೇ ಭಾಷಿಕ ಜನರಿಗೆ ಮತ್ತು ಅವರ ಅನುಯಾಯಿಗಳಿಗೆ ಸತ್ಯದ ಸಾಕ್ಷಾತ್ಕಾರ ಮಾಡಿಸಿದ್ದಾರೆ. ಅದೇ ರೀತಿ ಕರ್ನಾಟಕ ಶೈವ ಧರ್ಮದ ಎರಡು ಪಂಥಗಳಾದ ಲಕುಲೀಶ ಪಾಶುಪಥ. ಮತ್ತು ಕಾಳಾಮುಖ ಪಂತಗಳ ಆಚರಣೆ ಮತ್ತು ಸ್ವರೂಪಗಳ ಕುರಿತು ಶಾಸನಗಳ ಮೂಲಕ ಸವಿಸ್ತಾರವಾದ ಮಾಹಿತಿಯನ್ನು ಕಲೆಹಾಕಿ ತಮ್ಮ ಸಂಧೋಧನಾ ಕೃತಿಯಲ್ಲಿ ವಿಶ್ಲೇಷಿಸಿರುವರು.

"ವೀರಶೈವ ಧರ್ಮದ ಪ್ರವರ್ತಕ ವೀರಭದ್ರ ದೇವರು ದಕ್ಷ ಯಜ್ಞ ಸಂಹಾರಕನಲ್ಲ" ಎಂಬ ಸಂಶೋಧನಾ ಕೃತಿಯಲ್ಲಿ ವೀರಭದ್ರ ದೇವರು ಯಾರು? ಅವರು ಏತಕ್ಕಾಗಿ ಜನ್ಮತಾಳಿದರು? ದಕ್ಷನ ಯಜ್ಞವನ್ನು ನಾಶ ಮಾಡಿದವರು ಈ ವೀರಭದ್ರರೇ? ಎಂಬ ವಿಚಾರಗಳಿಗೆ ಕೆಲವೊಂದು ಪುರಾಣಗಳನ್ನು ಆಧಾರವಾಗಿಟ್ಟುಕೊಂಡು ವೀರಭದ್ರನ ವ್ಯಕ್ತಿತ್ವವನ್ನು ಅಧ್ಯಯನದ ಮೂಲಕ ಮಾಡಿ ಸಂಶೋಧಕ ವರ್ಗದಲ್ಲಿದ್ದ ಭಿನ್ನಾಭಿಪ್ರಾಯವನ್ನು ದೂರಮಾಡಿದ್ದಾರೆ.

ಎಂ. ಪಿ. ಪಾಟೀಲರು ಸಂಶೋಧನಾ ಕೃತಿಗಳನ್ನು ಮಾತ್ರ ರಚನೆ ಮಾಡದೆ ಸೃಜನ ಶೀಲ ಸಾಹಿತ್ಯದ ಪ್ರಕಾರಗಳಾದ ನಾಟಕ,ಸಣ್ಣಕತೆ, ಆತ್ಮಚರಿತ್ರೆ, ಕನ್ನಡಮರಾಠಿ ಲೇಖನಗಳನ್ನು ರಚಿಸಿದ್ದಾರೆ. ಎಂ. ಪಿ. ಪಾಟೀಲರು ಭಕ್ತಿಭಂಡಾರಿ ಬಸವಣ್ಣ ನಾಟಕವನ್ನು ಹಾಗು 'ಬಸವಣ್ಣ ನನ್ನ ಮಗನಿಗೆ ಬುದ್ಧಿ ಕೊಡಪ್ಪಾ' ಎಂಬ ಸಣ್ಣ ಕತೆಯನ್ನು ರಚಿಸಿದ್ದಾರೆ. ಮಹಿಮಾ ಪುರುಷರಾದ ಗುರುದೇವ ರಾನಡೆ, ಮೃತ್ಯುಂಜಯ ಮಹಾಸ್ವಾಮಿಗಳು, ಶಾಂತಲಿಂಗ ಶಿವಯೋಗಿಗಳು, ಪ್ರಜಾಪ್ರಭುತ್ವದ

ಮೌಲ್ಯಗಳಂಥಹ ಲೇಖನಗಳನ್ನು ಕನ್ನಡ-ಮರಾಠಿ ಭಾಷೆಯಲ್ಲಿ ರಚಿಸಿದ್ದಾರೆ. ದ್ವಿಭಾಷಿಕ ವರ್ಗದ ಸಾಹಿತ್ಯಪ್ರಿಯರಿಗೆ ಇವರು ಇತಿಹಾಸವನ್ನು ಕಟ್ಟಿಕೊಡುವ ಕಾರ್ಯ ಮಾಡಿದ್ದಾರೆ. ತಮ್ಮ ಜೀವನದ ಸಿಹಿ ಕಹಿ ಘಟನೆಗಳನ್ನು ಮೆಲುಕು ಹಾಕುವ ಉದ್ದೇಶದಿಂದ ತಮ್ಮದೆ ಆದ ಜೀವನ ಚರಿತ್ರೆಯನ್ನು ರಚಿಸಿದ್ದಾರೆ. ರಾಜಕೀಯ ಜೀವನದ ಒತ್ತಡದ ಮಧ್ಯೆಯೂ ಬಿಡುವು ಮಾಡಿಕೊಂಡು ಸಾಹಿತ್ಯ, ಸಂಶೋಧನೆಯಲ್ಲಿ ತೊಡಗಿಸಿಕೊಂಡ ಎಂ. ಪಿ. ಪಾಟೀಲರು ಸಮಕಾಲೀನ ಸಂಶೋಧಕರಾದ ಬಿ. ಕೆ. ಖಡಬಡಿ, ಫ. ಗು. ಹಳಕಟ್ಟಿ, ಡಾ. ಶಿ. ಚೆ. ನಂದಿಮಠ, ಪಾಲ್ಕಂಡವಾಲಾ, ಶಿ. ಶಿ. ಬಸವನಾಳರಂಥ ಸಂಶೋಧಕರಿಂದ ಪ್ರಶಂಸೆಗೆ ಪಾತ್ರರಾಗಿದ್ದಾರೆ.

ಬಸವಣ್ಣ ಮತ್ತು ಜಾತ್ಯಾತೀತ ಸಮಾಜಕ್ಕಾಗಿ ಎಂ. ಪಿ. ಪಾಟೀಲರ ಸಂಶೋಧನೆಗಳು ಬಹಳ ಪ್ರಾಮುಖ್ಯತೆಯನ್ನು ಪಡೆದಿರುತ್ತವೆ. ಬಸವಣ್ಣನವರ ತತ್ವ, ಸಂದೇಶಗಳು ವೀರಶೈವ ಧರ್ಮದ ಪುನುರುತ್ಥಾನದ ಸಂಕೇತಗಳಾಗಿ ನಿಲ್ಲುತ್ತವೆ. ಎಂ. ಪಿ. ಪಾಟೀಲರ ಕಾಲಘಟ್ಟದವರೆಗೆ ಬಸವಣ್ಣ ಮತ್ತು ವೀರಶೈವ ಧರ್ಮದ ಕುರಿತು ಆದ ಅಧ್ಯಯನಗಳು ಅಷ್ಟೇನು ತೃಪ್ತಿಕರವಾಗಿದ್ದಿರಲಿಲ್ಲ. ಇದನ್ನು ಮನಗಂಡ ಎಂ. ಪಿ. ಪಾಟೀಲರು ಈ ವಿಷಯಗಳ ಸತ್ಯ ಶೋಧನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಶಾಸನಗಳನ್ನು, ಐತಿಹಾಸಿಕ ಪುರಾವೆಗಳನ್ನು ಆಧಾರವಗಿಟ್ಟುಕೊಂಡು ವ್ಯವಸ್ಥಿತವಾದ ಅಧ್ಯಯನದ ಕೈಕೊಳ್ಳುದರ ಮೂಲಕ ಸಮಾಜಕ್ಕೆ ಸತ್ಯವನ್ನು ತೋರ್ಪಡಿಸುವ ಕಾರ್ಯವನ್ನು ಮಾಡಿದ್ದಾರೆ.

**ವ್ಯಾಪ್ತಿ:**

ಎಂ. ಪಿ. ಪಾಟೀಲರು ಕೈಕೊಂಡ ಸಂಶೋಧನೆಗಳು ಗಟ್ಟಿತನದಿಂದ ಕೂಡಿರುತ್ತವೆ. ಸರಳವಾದ ವಿಷಯದ ಮೂಲಕ ನಿರೂಪಿತವಾಗಿರುತ್ತವೆ. ಈ ಸಂಶೋಧನಾ ಅಧ್ಯಯನದಿಂದ ಇತಿಹಾಸದಲ್ಲಿ ಮಿಂಚಿ ಮರೆಯಾಗಿ ಹೋದ ಅನೇಕ ನಾಯಕರ ಕುರಿತು ಹೆಚ್ಚಿನ ಅಧ್ಯಯನಗಳು ನಡೆದು ಸಂಶೋಧನಾ ಕ್ಷೇತ್ರವನ್ನು ಶ್ರೀಮಂತಗೊಳಿಸಿರುತ್ತವೆ. ಇತಿಹಾಸವನ್ನು ಪುನರ್‌ನಿರ್ಮಿಸುವ ಉದ್ದೇಶದಿಂದ ಮತ್ತು ವಿಚಾರಗಳನ್ನು ಮುಂದಿನ ಪೀಳಿಗೆಗೆ ಕೊಂಡೊಯ್ಯುವ ಏಕೈಕ ಮಹದಾಸೆಯಿಂದ ಇಂಥ ಅಧ್ಯಯನಗಳು ಅವಶ್ಯಕವಾಗಿರುತ್ತವೆ.

ಅಧ್ಯಯನದ ಅನುಕೂಲಕ್ಕಾಗಿ ನಿಬಂಧವನ್ನು ಐದು ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಅವು ಇಂತಿವೆ.

೧. ಅಧ್ಯಯನದ ಉದ್ದೇಶ,ಸ್ವರೂಪ ಮತ್ತು ವ್ಯಾಪ್ತಿ

೨. ಎಂ. ಪಿ. ಪಾಟೀಲರ ಜೀವನದ ಘಟ್ಟಗಳು

೩. ಎಂ. ಪಿ. ಪಾಟೀಲರ ಸೃಜನ ಸಾಹಿತ್ಯ

೪. ಎಂ. ಪಿ. ಪಾಟೀಲರ ಸಂಶೋಧನಾ ಕೃತಿಗಳು

೫. ಅಧ್ಯಯನದ ಫಲಿತಗಳು

ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿಯ ಕುರಿತು ವಿವೇಚಿಸಲಾಗಿದೆ. ಇದುವರೆಗೆ ಆದ ಅಧ್ಯಯನಗಳ ಸಂಕ್ಷಿಪ್ತ ಅವಲೋಕನವನ್ನು ಇಲ್ಲಿ ನೀಡಲಾಗಿದೆ. ನಿಬಂಧದ ಅಧ್ಯಯನ ಕ್ರಮ ಮತ್ತು ಅಧ್ಯಯನದ ವಿಧಾನಗಳನ್ನು ತಿಳಿಸಲಾಗಿದೆ.

ಎರಡನೇ ಅಧ್ಯಾಯದಲ್ಲಿ ಎಂ. ಪಿ. ಪಾಟೀಲರ ಜೀವನ ಘಟ್ಟಗಳು ಬಾಲ್ಯಮತ್ತು ಶೈಕ್ಷಣಿಕ ಜೀವನ, ಕೌಟುಂಬಿಕವೃತ್ತಿ ಜೀವನ, ಸಾಹಿತ್ಯ ಮತ್ತು ಸಂಶೋಧನೆ, ಸಮಾಜಸೇವೆ ಮತ್ತು ಸ್ವಾತಂತ್ರ್ಯ ಚಳುವಳಿಗಳನ್ನು ಸಂಕ್ಷಿಪ್ತವಾಗಿ ತಿಳಿಸಲು ಪ್ರಯತ್ನಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಎಂ. ಪಿ. ಪಾಟೀಲರ ಸೃಜನಶೀಲ ಸಾಹಿತ್ಯದ ಕುರಿತು ಹೇಳಲಾಗಿರುತ್ತದೆ. ಅವುಳೆಂದರೆ ಕನ್ನಡ ಮತ್ತು ಮರಾಠಿ ಲೇಖನಗಳು, ನಾಟಕ, ಸಣ್ಣ ಕಥೆ, ಮತ್ತು ಆತ್ಮಚರಿತ್ರೆಗಳ ಕುರಿತು ಸ್ಥೂಲವಾಗಿ ಪರಿಚಯಿಸಲಾಗಿದೆ.

ನಾಲ್ಕನೇ ಅಧ್ಯಾಯದಲ್ಲಿ ಸಂಶೋಧನಾ ಕೃತಿಗಳಾದ ಶ್ರೀ ಬಸವೇಶ್ವರ ಚರಿತ್ರೆಯ ಮೇಲೆ ಹೊಸ ಬೆಳಕು, ಲಾಕುಳ ಶೈವದ ಅಥವಾ ಕಾಳಾಮುಖ ಶೈವ ನಿಜ ಸ್ವರೂಪ, ವೀರಶೈವ ಧರ್ಮದ ಪ್ರವರ್ತಕ ವೀರಭದ್ರ ದೇವರು ದಕ್ಷ ಯಜ್ಞ ಸಂಹಾರಕ ವೀರಭದ್ರನಲ್ಲ, ಇತ್ಯಾದಿ ಸಂಶೋಧನಾ ಕೃತಿಗಳನ್ನು ಅಭ್ಯಸಿಸಲಾಗಿದೆ.

ಐದನೇ ಅಧ್ಯಾಯದಲ್ಲಿ ಅಧ್ಯಯನದ ಒಟ್ಟು ಫಲಿತಗಳನ್ನು ಕುರಿತು ವಿವೇಚಿಸಲಾಗಿದೆ.

ಹೀಗೆ ಈ ನಿಬಂಧವು ಐದು ಅಧ್ಯಾಯಗಳಲ್ಲಿ ಬಿಚ್ಚಿಕೊಂಡಿದೆ. ಕೆಲವು ಮಹತ್ವಪೂರ್ಣವಾದ ಹಾಗೂ ನಿಬಂಧಕ್ಕೆ ಪೂರಕವಾದ ಮಾಹಿತಿಗಳನ್ನ ಅನುಬಂಧದಲ್ಲಿ ಒದಗಿಸಲಾಗಿದೆ.

ಎಂ. ಪಿ. ಪಾಟೀಲರ ವ್ಯಕ್ತಿತ್ವ ಮತ್ತು ಅವರು ಮಾಡಿರುವ ಕಾರ್ಯಗಳನ್ನು ಜನತೆಗೆ ಪರಿಚಯಿಸಿರುವುದು ಅವಶ್ಯಕವಾಗಿರುತ್ತದೆ. ಈ ನಿಟ್ಟಿನಲ್ಲಿ ಇವರ ಬಗೆಗೆ ಹಲವು ಕೃತಿಗಳು ಪ್ರಕಟಗೊಂಡಿರುತ್ತವೆ. ಅವುಗಳಲ್ಲಿ ಶ್ರೀ ಜಗದ್ಗುರು ತೋಂಟದಾರ್ಯಮಠ ಡಂಬಳ ಇವರು ಹೊರ ತಂದಿರುವ ಎಂ. ಪಿ. ಪಾಟೀಲರು ಕೃತಿ ಮಹತ್ವದ್ದು. ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು–ಸಮಗ್ರ ಸಾಹಿತ್ಯ ೧. ಎಂ. ಪಿ. ಪಾಟೀಲರ ಸಂಶೋಧನೆಗಳು ಸಮಗ್ರ ಸಾಹಿತ್ಯ ೨ ಎಂಬ

ಕೃತಿಗಳು ಡಾ. ಗುರುಪಾದ ಎಸ್. ಮರಿಗುದ್ದಿಯವರಿಂದ ಸಂಪಾದನೆಗೊಂಡಿವೆ. ೨೦೦೨ ರಲ್ಲಿ ಸಂಕೇಶ್ವರದಲ್ಲಿ ಜರುಗಿದ ಎಂ. ಪಿ. ಪಾಟೀಲರ ಜನ್ಮಶತಮಾನೋತ್ಸವದ ಅಂಗವಾಗಿ "ಸಾರ್ಥಕ" ಎಂಬ ಕೃತಿ ಮೂಡಿದ್ದು, ಅದರಲ್ಲಿ ಹಲವಾರು ಮಹನೀಯರು ಲೇಖನಗಳಿವೆ. ಪಾಟೀಲ ಪುಟ್ಟಪನವರ 'ಮುರಾರ್ಜಿ ದೇಸಾಯಿ ಅವರು ಮೆಚ್ಚಿದ ಎಂ. ಪಿ. ಪಾಟೀಲರು' ಎಂಬ ಲೇಖನ ಬರೆದಿರುವರು. ಬಸಗೌಡ ಅ. ಪಾಟೀಲ ಡಾ. ಎಸ್. ಎಸ್. ಪಲ್ಲೇದ, ಶಂಕರ ಮ. ಪಾಟೀಲ, ಎಸ್. ಎಸ್. ಪಾಟೀಲ, ಎಸ್. ವ್ಹಿ. ಪಾಟೀಲ, ಮ. ಗು. ಘಿವಾರಿ, ಡಾ. ಗುರುಪಾದ ಎಸ್. ಮರಿಗುದ್ದಿ, ಕನ್ನಡದಲ್ಲಿ, ಎಸ್.ವ್ಹಿ.ಪಾಟೀಲ ಹುಲಕುಂದ ಶ್ರೀಮತಿ ಸುಶೀಲಾ ಗೌರಿ, ಡಾ.ಜಿ.ಎಸ್.ಗೌರಿ ಆಂಗ್ಲ ಭಾಷೆಯಲ್ಲಿ, ಶ್ರೀಕಾಂತ ಅರಳಿ ಮೊದಲಾದವರು ಮರಾಠಿಯಲ್ಲಿ ಲೇಖನಗಳನ್ನು ಬರೆದಿರುವರು. ಡಾ. ಗುರುಪಾದ ಎಸ್. ಮರಿಗುದ್ದಿ ಅವರು ಸಂಪಾದಿಸಿದ "ಉತ್ತಮ ಸಂಸದೀಯ ಪಟು" ಎಂ. ಪಿ. ಪಾಟೀಲರು ಎಂಬ ಲೇಖನಗಳು ಮತ್ತು ಕೃತಿಗಳು ಅಧ್ಯಯನಕ್ಕೆ ಪೂರಕವಾದ ಆಕರಗಳಾಗಿವೆ.

ಒಟ್ಟಿನಲ್ಲಿ ಎಂ. ಪಿ. ಪಾಟೀಲರ ಕುರಿತಾದ ಈ ನಿಬಂಧವು ವೀರಶೈವ ಧರ್ಮ ಮತ್ತು ಬಸವಣ್ಣವರ ಬಗ್ಗೆ ಸಂಶೋಧಕ ಸಮೂಹದಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ದೂರಮಾಡುವುದಾಗಿದೆ. ಸತ್ಯ ಸಂಗತಿಗಳನ್ನು ನಿವೇದಿಸುವ ಪ್ರಾಮಾಣಿಕ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ. ಸಂಶೋಧನೆಯ ಸ್ಥಿತಿಗತಿಗಳನ್ನು ಅರಿತು ನಿರ್ದಿಷ್ಟ ಚೌಕಟ್ಟಿನೊಳಗೆ ವಿವರಣೆ, ವಿಶ್ಲೇಷಣೆ ಕೊಡುವದರ ಜೊತೆಗೆ ಎಂ.ಪಿ.ಪಾಟೀಲರ ಸಂಶೋಧನ ಸ್ವರೂಪ, ವೈಧಾನಿಕತೆ ತಿಳಿಯಲು ಪ್ರಯತ್ನಿಸಲಾಗಿದೆ. ಎಂ. ಪಿ. ಪಾಟೀಲರ ಮೇಲೆ ಆದ ಅಧ್ಯಯನಗಳ ಆಕರಗಳಿಂದ ವಿಷಯಗಳನ್ನು ಗುರುತಿಸಲಾಗಿದೆ. ಎಂ. ಪಿ. ಪಾಟೀಲರ ಬಗೆಗಿನ ಸಾಹಿತಿ ವಿದ್ವಾಂಸರ ಅಭಿಪ್ರಾಯಗಳನ್ನು ಅನುಲಕ್ಷಿಸಲಾಗಿದೆ. ಈ ಎಲ್ಲ ವಿಧಾನಗಳ ಮೂಲಕ ಪ್ರಸ್ತುತ ಅಧ್ಯಯನವನ್ನು ಕೈಕೊಳ್ಳಲಾಗಿದೆ.

ರಾಜಕೀಯದಲ್ಲಿ ಇದ್ದುಕೊಂಡು ಸಾಹಿತ್ಯ ರಚನೆ ಮಾಡಿರುವ ಎಂ. ಪಿ. ಪಾಟೀಲರು ಎಂ. ಪಿ. ಪ್ರಕಾಶ. ವೀರಪ್ಪ ಮೊಯ್ಲಿ, ಎಚ್. ವಿಶ್ವನಾಥರಂಥ ವ್ಯಕ್ತಿಗಳ ಸಾಲಿಗೆ ಸೇರುತ್ತಾರೆ. ಸಂಶೋಧನೆಯ ಕಾರ್ಯ ಬಸವಣ್ಣ, ವೀರ್‍ಶೈವ ಧರ್ಮದ ಕಾರ್ಯವೆಂದು ತಿಳಿದು ಗಡಿ ಭಾಗ ಸಂಕೇಶ್ವರದಲ್ಲಿ ಹುಟ್ಟಿ ಮರಾಠಿ ಶಿಕ್ಷಣ ಪಡೆದರೂ ಕನ್ನಡದಲ್ಲಿ ಸಾಹಿತ್ಯ ಮತ್ತು ಸಂಶೋಧನಾ ಕೃತಿಗಳನ್ನು ರಚಿಸಿದ್ದಾರೆ. ಇವರ ಈ ಕಾರ್ಯ ವೈಖರಿ ಎಂಥವರನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತದೆ.

ಅಧ್ಯಾಯ ೨

## ಎಂ. ಪಿ. ಪಾಟೀಲರ ಜೀವನದ ಪ್ರಮುಖ ಘಟ್ಟಗಳು:

ಕನ್ನಡ ನಾಡಿನ ಸಾಹಿತ್ಯ ಪರಂಪರೆಯ ಬೆಳವಣಿಗೆಯಲ್ಲಿ ಬೆಳಗಾವಿ ಜಿಲ್ಲೆಯು ತನ್ನದೇ ಆದ ಕೊಡುಗೆಯನ್ನು ನೀಡಿದೆ. ಇಲ್ಲಿಯ ವಿದ್ವತ್ತು, ಪರಂಪರೆಯನ್ನು ಗಮನಿಸಿದಾಗ ಹಲವಾರು ಕವಿಗಳು, ಲೇಖಕರು, ವಿಮರ್ಶಕರು, ಸಂಶೋಧಕರು, ತಮ್ಮದೇ ಆದ ಸಾಹಿತ್ಯಿಕ ಕೊಡುಗೆಯನ್ನು ನೀಡಿದ್ದಾರೆ. ಇಂತ ಸಾಧನೆಗೈದವರ ಪಟ್ಟಿಯಲ್ಲಿ ಗಡಿಭಾಗ ಸಂಕೇಶ್ವರ ಮತ್ತು ಸುತ್ತಮುತ್ತಲಿನ ಪ್ರದೇಶಗಳ ಪಾತ್ರ ಅನನ್ಯವಾಗಿದೆ. ಸಂಕೇಶ್ವರವು ಐತಿಹಾಸಿಕವಾಗಿ, ಸಾಂಸ್ಕೃತಿಕವಾಗಿ, ಸಾಹಿತ್ಯಿಕವಾಗಿ ಪ್ರಸಿದ್ಧಿಯನ್ನು ಹೊಂದಿದೆ. ಈ ಭಾಗದಲ್ಲಿ ಕನ್ನಡವು ಅಧಿಕೃತ ಭಾಷೆಯಾಗಿದ್ದರೂ ಕೂಡಾ ೧೮,೧೯ನೇ ಶತಮಾನದಲ್ಲಿ ಈ ಪ್ರದೇಶವು ಮರಾಠಿಯ ಪ್ರಾಬಲ್ಯಕ್ಕೆ ಒಳಪಟ್ಟಿತ್ತು. ಇಂತ ಸನ್ನಿವೇಶದಲ್ಲಿ ಕನ್ನಡ ಸಾಹಿತ್ಯ ನಿರ್ಮಿಸುವುದೆಂದರೆ ದೊಡ್ಡ ಸಾಹಸವೇ ಸರಿ. ಈ ಸಂಧರ್ಭದಲ್ಲಿ ಮರಾಠಿ ಭಾಷೆಯಲ್ಲಿ ಶಿಕ್ಷಣ ಪಡೆವರೂ ಸಹ ಕನ್ನಡದ ನಂದಾದೀಪವನ್ನು ಬೆಳಗಿದ ಹಲವು ಮಹನೀಯರಲ್ಲಿ ಎಂ. ಪಿ. ಪಾಟೀಲರು ಒಬ್ಬರಾಗಿದ್ದಾರೆ. ಅವರ ಜನನ, ಬಾಲ್ಯ, ಶೈಕ್ಷಣಿಕ ಜೀವನದ ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

### ೨.೧ ಬಾಲ್ಯ ಮತ್ತು ಶೈಕ್ಷಣಿಕ ಜೀವನ :

ಕರ್ನಾಟಕದ ಕೊನೆಯ ಹಾಗು ಮಹಾರಾಷ್ಟ್ರದ ಹೆಬ್ಬಾಗಿಲು ಎಂದು ಕರೆಯಲ್ಪಡುವ ಸಂಕೇಶ್ವರವು ಬೆಳಗಾವಿಯಿಂದ ೬೦ ಕಿ.ಮೀ. ಅಂತರದಲ್ಲಿ ಹಿರಣ್ಯಕೇಶಿಯ ತಟದಲ್ಲಿ ನೆಲೆನಿಂತಿದೆ. ಮರಾಠಿ ಹಾಗೂ ಕನ್ನಡ ಭಾಷಿಕರ ಆರಾಧ್ಯದೈವವಾಗಿ ಶ್ರೀ ಶಂಕರಾಚಾರ್ಯರು ನಿರ್ಮಿಸಿದ ಮಠವು ಊರಿಗೆ ಒಂದು ಐತಿಹಾಸಿಕ ಕುರುಹಾಗಿ ಪ್ರಾಚೀನ ಕಾಲದ ಕಲೆ, ವಾಸ್ತುಶಿಲ್ಪದ ಸ್ಥಳವಾಗಿ ಪ್ರವಾಸಿಗರನ್ನು ತನ್ನತ್ತ ಸೆಳೆಯುತ್ತಿದೆ.

ಇಂತಹ ಪರಿಸರದಲ್ಲಿ 'ವತನದಾರಿ ಗೌಡಿಕೆಯ ಮನೆತನದಲ್ಲಿ ಶ್ರೀಯುತ ಎಂ. ಪಿ. ಪಾಟೀಲರು ೪ನೇ ಫೆಬ್ರುವರಿ ೧೯೦೧ ರಂದು ತಂದೆ ಪುನಗೌಡ, ತಾಯಿ ಗಂಗಾಬಾಯಿಯವರ ೩ನೇ ಮಗನಾಗಿ ಜನಿಸಿದರು'[೧]. ಇವರು ಪೂರ್ಣ ಹೆಸರು ಮಲ್ಲನಗೌಡ ಪುನಗೌಡ ಪಾಟೀಲ. ಪುನಗೌಡರಿಗೆ ಮಲ್ಲನಗೌಡರಿಗಿಂತ ಮೊದಲು ಇಬ್ಬರು ಮಕ್ಕಳಿದ್ದರು. ದುರದೃಷ್ಟವಶಾತ ಅವರು ತೀರಿಹೋದದ್ದರಿಂದ ಮಲ್ಲನಗೌಡರು ಮನೆಗೆ ಮೊದಲು ಗಂಡು ಮಗುವಾದರು. ಇವರಿಗೆ ದುಂಡವ್ವ

ಮತ್ತು ಲಕ್ಷ್ಮೀಬಾಯಿ ಎಂಬ ಇಬ್ಬರು ಸಹೋದರಿಯರಿದ್ದರು. ಇವರಲ್ಲಿ ಲಕ್ಷ್ಮೀಬಾಯಿವರು ಚಿಕ್ಕಂದಿನಲ್ಲಿಯೇ ಸಾವನ್ನಪಿದ್ದರು. ದುಂಡವ್ವಾ ಎಂಬುವವಳನ್ನು ಸಮೀಪದ ಗೌಡವಾಡ ಹಳ್ಳಿಯ ಗೌಡರ ಮನೆತನದಲ್ಲಿ ವಿವಾಹ ಮಾಡಿಕೊಟ್ಟಿದ್ದರು.

ಮಲ್ಲನಗೌಡರ ತಂದೆ ಪುನಗೌಡರು ಕೃಷಿಕರಾಗಿದ್ದು ಹಿರಿಯರಿಂದ ಬಂದ ಜಮೀನಿನಲ್ಲಿ ಸಾಗುವಳಿ ಮಾಡುತ್ತ ಸಂಸಾರವನ್ನು ಸಾಗಿಸಿಕೊಂಡು ಹೋಗುತ್ತಿದ್ದರು. ತಾಯಿ ಗಂಗುಬಾಯಿಯವರಂತೂ ಪತಿಯ ಹೆಗಲಿಗೆ ಹೆಗಲು ಕೊಟ್ಟು ಬಾಲಕ ಮಲ್ಲನಗೌಡರನ್ನು ಒಳ್ಳೆಯ ಸಂಸ್ಕಾರ ಮತ್ತು ಸಂಸ್ಕೃತಿಯೊಂದಿಗೆ ಬೆಳೆಸುತ್ತಿದ್ದರು. ಮಲ್ಲನಗೌಡರ ಭಾವಿ ಜೀವನವನ್ನು ರೂಪಿಸುವಲ್ಲಿ ದಂಪತಿಗಳು ನಿರತರಾಗಿದ್ದರು.

ಸುಂದರವಾಗಿ ಕಟ್ಟಿದ ಗೋಪುರಕ್ಕೆ ಸಿಡಿಲುಬಡೆದಂತೆ ಯಾವುದೋ ಜಮೀನಿನ ಖಟ್ಲೆಯಲ್ಲಿ ಪುನಗೌಡರು ಅಪರಾಧಿಯೆಂದು ಕೋರ್ಟಿನ ಮೆಟ್ಟಿಲು ಏರಬೇಕಾದ ಸಂದರ್ಭ ಒದಗಿಬಂತು. ಆ ನ್ಯಾಯದ ಇತ್ಯರ್ಥಕ್ಕಾಗಿ ಹಿರಿಯರಿಂದ ಬಳವಳಿಯಾಗಿ ಬಂದಿದ್ದ ಜಮೀನನ್ನು ಕಳೆದುಕೊಂಡರು. ಕೊನೆಗೆ ನ್ಯಾಯ ತಮ್ಮಂತೆಯಾದರೂ ಅದರಿಂದ ಬಹಳೇ ಹಾನಿಯನ್ನು ಅನುಭವಿಸಿದರು. ಉಳಿದ ಅಲ್ಪಸ್ವಲ ಜಮೀನಿನಲ್ಲಿ ವ್ಯವಸಾಯ ಕೈಕೊಂಡು ಬಡತನದಲ್ಲಿ ಸಂಸಾರವನ್ನು ಸಾಗಿಸಿದರು. ಮಲ್ಲನಗೌಡರು ಕಷ್ಟದ ಜೀವನದಲ್ಲಿಯೇ ತಂದೆತಾಯಿಗಳ ಕಾರ್ಯಕ್ಕೆ ನೆರವಾಗುತ್ತ ತಮ್ಮ ಜೀವನವನ್ನು ಧೈರ್ಯದಿಂದ ರೂಪಿಸಿಕೊಂಡರು.

**ಶೈಕ್ಷಣಿಕ ಜೀವನ:**

ಬಾಲ್ಯದಲ್ಲಿ ತಂದೆಯ ಪ್ರತಿಯೊಂದು ಕಾರ್ಯದಲ್ಲಿ ನೆರವಾಗುತ್ತ ಉತ್ತಮ ಸಂಸ್ಕಾರಯುತ ಬಾಲಕನಾಗಿ ಮಲ್ಲನಗೌಡರು ಬೆಳೆಯತೊಡಗಿದರು. ಬ್ರಿಟಿಷ ಭಾರತದಲ್ಲಿ ಬೊಂಬಾಯಿ ಪ್ರಾಂತಕ್ಕೆ ಸೇರಿದ್ದ ಸಂಕೇಶ್ವರದಲ್ಲಿ ಮನೆಯಲ್ಲಿ ಆಡುವ ಭಾಷೆ ಕನ್ನಡವಾಗಿದ್ದರೂ ಮರಾಠಿ ಭಾಷೆಯಲ್ಲಿ ಶಿಕ್ಷಣ ದೊರೆಯುತ್ತಿತ್ತು. 'ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಮಲ್ಲನಗೌಡರನ್ನು ಆರು ವರ್ಷ ತುಂಜಿದ ಬಳಿಕ ಅಂದರೆ ೧೯೦೭ ರಲ್ಲಿ ಶಾಲೆಗೆ ಸೇರಿಸಿದರು'[೨]. ತಂದೆಯ ವ್ಯವಸಾಯದಲ್ಲಿ ನೆರವಾಗುತ್ತ ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಆ ಕಾಲದ ಸಾಮಾಜಿಕ ಸ್ಥಿತಿಯನ್ನೊಮ್ಮೆ ಗಮನಿಸಿದಾಗ ಶಿಕ್ಷಣವನ್ನು ಹೊರತುಪಡಿಸಿ ಎಲ್ಲಾ ವ್ಯವಹಾರಗಳು ಮಾತೃಭಾಷೆ ಕನ್ನಡದಲ್ಲಿಯೇ ನಡೆಯುತ್ತಿದ್ದವು. ಆದರೆ ಶಿಕ್ಷಣ ಮಾತ್ರ ಮರಾಠಿ ಭಾಷೆಯಲ್ಲಿ ನಡೆಯುತ್ತಿದ್ದದರಿಂದ ಎಂ. ಪಿ. ಪಾಟೀಲರು ಮರಾಠಿ ಶಾಲೆಗೆ ಪ್ರವೇಶ ಪಡೆಯಬೇಕಾಯಿತು. ಮನೆಯಲ್ಲಿ ಆಡುವ ಭಾಷೆ ಕನ್ನಡ, ಶಾಲೆಯಲ್ಲಿಯ ಅಧ್ಯಯನದ ಭಾಷೆ ಮರಾಠಿ ಇಂತಹ ಪರಿಸ್ಥಿತಿಯಲ್ಲಿ ಎದೆಗುಂದದ ಮಲ್ಲನಗೌಡರು

ತಮ್ಮ ವಿದ್ಯಾಭ್ಯಾಸವನ್ನು ಮುಂದುವರೆಸಿದರು. ಆ ಕಾಲದ ಶೈಕ್ಷಣಿಕ ಪದ್ಧತಿಯ ಮೇಲೆ ಒಂದಿಷ್ಟು ಗಮನ ಹರಿಸಿದಾಗ ಒಂದು ಸಂಗತಿ ಗೊತ್ತಾಗುತ್ತದೆ. ಅಧ್ಯಯನದ ಎಲ್ಲ ವಿಷಯಗಳು ಮರಾಠಿಯಲ್ಲಿ ಇರುತ್ತಿದ್ದವು. ಆದರೆ ಭೋಧನೆ ಮಾತ್ರ ಕನ್ನಡ ಭಾಷೆಯಲ್ಲಿ ನಡೆಯುತ್ತಿತ್ತು. 'ಸ್ವತಃ ಎಂ. ಪಿ. ಪಾಟೀಲರು ಹೇಳುವಂತೆ ನಮ್ಮಲ್ಲಿಯ ಚಿಕ್ಕ ಮಕ್ಕಳಿಗೆ ಇಂಗ್ಲೀಷ ಕಲಿಸುವುದು ಎಷ್ಟು ಅಸಾಧ್ಯವಾಗಿತ್ತೋ ಅಷ್ಟೇ ಮರಾಠಿ ಭಾಷೆಯನ್ನು ಅರಗಿಸಿಕೊಳ್ಳುವುದು ಕಷ್ಟವಾಗುತ್ತಿತ್ತು'[೨]. ಆದರೂ ಛಲಬಿಡದ ಮಲ್ಲನಗೌಡರು ಮರಾಠಿ ಶಾಲೆಗೆ ಪ್ರವೇಶ ಪಡೆದು ಒಂದೆರಡು ವರ್ಷಗಳಲ್ಲಿ ಮರಾಠಿ ಭಾಷೆಯನ್ನು ಕಲಿತರು.

ಆ ಕಾಲದಲ್ಲಿ ಶಿಕ್ಷಣವು ಸುಲಭವಾಗಿ ಕೈಗೆಟುಕುವಂತಿರಲಿಲ್ಲ. ಅನೇಕ ತೆರನಾದ ಕಷ್ಟಗಳನ್ನು ಸಹಿಸಿಕೊಂಡು ಶಿಕ್ಷಣವನ್ನು ಪಡೆಯಬೇಕಾಗುತ್ತಿತ್ತು. ಮನೆಯ ಕಷ್ಟ ಒಂದು ಕಡೆಯಾದರೆ, ಶಾಲೆಯಲ್ಲಿ ಶಿಕ್ಷಕರು ಕೊಡುವ ಕಷ್ಟ ಇನ್ನೊಂದುಕಡೆಯಾಗಿತ್ತು. ಅಂತಹ ಒಂದೂ ಅನುಭವ ಮಲ್ಲನಗೌಡರ ಬಾಲ್ಯದಲ್ಲಿ ಘಟಿಸದೇ ಇದ್ದರೂ ಆ ಘೋರ ಸನ್ನಿವೇಶದ ನೆನಪುಗಳು ಮಾತ್ರ ಅವರ ಶಿಕ್ಷಣದ ಹಸಿವಿಗೆ ಎಂದೂ ಅಡ್ಡಿಪಡಿಸಲಿಲ್ಲ. ಹೀಗೆ ನಿರಾತಂಕವಾಗಿ ಸಾಗುತ್ತಿದ್ದ ಎಂ. ಪಿ. ಪಾಟೀಲರ ಶೈಕ್ಷಣಿಕ ಜೀವನದಲ್ಲಿ 'ಅರೇಬಿಯನ್ ನೈಟ್ಸ್'[೩] ಎಂಬ ಇಂಗ್ಲೀಷ ಕಥೆಗಳ ಮರಾಠಿ ಅನುವಾದ ಕೃತಿಯು ಅವರನ್ನು ಅತಿಹೆಚ್ಚು ಆಕರ್ಷಿಸಿ ಅವರ ಜೀವನದ ದಿಕ್ಕನ್ನೇ ಬದಲಿಸಿತು.

ಮಲ್ಲನಗೌಡರು ೬ನೇ ತರಗತಿಗೆ ಕಾಲಿಟ್ಟಾಗ ರಾ. ಅಂಭ್ಯಂಕರ ಎಂಬ ಬ್ರಾಹ್ಮಣ ಶಿಕ್ಷಕರಿಂದ ಜ್ಞಾನದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುತ್ತ ಮರಾಠಿ ಭಾಷೆಯ ಮೇಲೆ ಹಿಡಿತವನ್ನು ಕಾಯ್ದುಕೊಂಡರು. ಶಾಲೆಯ ವರ್ಗಕೋಣೆಯಲ್ಲಿ ನಡೆದ ಅನಿರೀಕ್ಷಿತ ಬೆಳವಣಿಗೆಯೊಂದರಲ್ಲಿ ರಾ. ಅಭ್ಯಂಕರ ಮಾಸ್ತರರಿಗೂ ಮತ್ತು ಮಲ್ಲನಗೌಡರ ಗುರು-ಶಿಷ್ಯ ಸಂಬಂಧಗಳಲ್ಲಿ ಆತ್ಮೀಯ ಬದಲಾವಣೆಗಳಾದವು. ಅಂದಿನಿಂದ ಮಲ್ಲನಗೌಡರು ಮೆಚ್ಚಿನ ಗುರುವಿನ ನೆಚ್ಚಿನ ಶಿಷ್ಯರಾದರು. ಅವರ ಪ್ರೀತಿಯ ಪರಿಸರದಲ್ಲಿಯೇ ಆ ಕಾಲದ ಇಂಗ್ಲೀಷ ಭಾಷೆಯ ಅವಶ್ಯಕತೆಯನ್ನು ಅರಿತು ಮನೆಯವರ ಒಪ್ಪಿಗೆಯನ್ನು ಪಡೆದು ಇಂಗ್ಲೀಷ ಶಿಕ್ಷಣ ಪಡೆಯುವುದರ ಜೊತೆಗೆ ಒಂದು ಹಂತದ ಶಿಕ್ಷಣವನ್ನು ಪೂರ್ಣಗೊಳಿಸಿದರು.

ಇನ್ನೂ ಹೆಚ್ಚು ಕಲಿತು ಸಾಧನೆ ಮಾಡಬೇಕೆಂಬ ಮಹಾದಾಸೆಯಿಂದ ಇಂಗ್ಲೀಷ ಶಿಕ್ಷಣಕ್ಕೆ ಹೆಚ್ಚಿನ ಒತ್ತುಕೊಟ್ಟು ಕಲಿಯತೊಡಗಿದರು. ಈ ಸಂದರ್ಭದಲ್ಲಿ "ರೋಗಿ ಬಯಸಿದ್ದು ಹಾಲು ಅನ್ನ, ವೈದ್ಯ ಹೇಳಿದ್ದು ಹಾಲು ಅನ್ನ" ಎಂಬ ಗಾದೆಮಾತಿನಂತೆ ಸಂಕೇಶ್ವರ ಭಾಗದ ವಿದ್ಯಾರ್ಥಿಗಳ ಇಂಗ್ಲೀಷ ಶಿಕ್ಷಣದ ದಾಹವನ್ನು

ನೀಗಿಸುವ ಉದ್ದೇಶದಿಂದ ಊರಿನ ಪ್ರಮುಖ ವ್ಯಕ್ತಿಗಳಾದ 'ನಿಜಲಿಂಗಪ್ಪಾ ಥಂಗ, ಮತ್ತು ನಾಗಪ್ಪಾ ಮಹಾಳಂಕ ಈ ಇಬ್ಬರು ಶಿಕ್ಷಣ ಪ್ರೇಮಿಗಳು ಗಡಿಭಾಗ ಸಂಕೇಶ್ವರದಲ್ಲಿ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ಇಂಗ್ಲೀಷ ಶಾಲೆಯೊಂದನ್ನು ಪ್ರಾರಂಭಿಸಿದರು. ಆ ಶಾಲೆಯು ಸಂಕೇಶ್ವರದಿಂದ ಒಂದು ಮೈಲಿ ದೂರದಲ್ಲಿರುವ ಹರಗಾಪೂರ ಗಡಕ್ಕೆ ಹೊಂದಿಕೊಂಡಿರುವ ಪಾದಗುಡಿ ಹತ್ತಿರ ಪ್ರಾರಂಭವಾಯಿತು[೫]' ಈ ಶಾಲೆಗೆ ಕೊಲ್ಲಾಪೂರದ ಮಾ. ಅಠಲ್ಯ ಅವರು ಅಧ್ಯಾಪಕರೆಂದು ನಿಯುಕ್ತಿ ಹೊಂದಿದ್ದರು. ಕೆಲವೇ ಸಮಯದಲ್ಲಿ ಮಾ. ಅಠಲ್ಯ ಮತ್ತು ಮಲ್ಲನಗೌಡರ ಮಧ್ಯೆ ಅನೋನ್ಯವಾದ ಸಂಬಂಧ ಬೆಳೆದವು. ಗುರುಗಳ ಮನೆಯಲ್ಲಿಯೇ ಒಬ್ಬ ಸದಸ್ಯನಾಗಿ ಎಂ. ಪಿ. ಪಾಟೀಲರು ಬೆಳೆಯತೊಡಗಿದರು.

ಹೀಗೆ ಎಂ. ಪಿ. ಪಾಟೀಲರ ಶಿಕ್ಷಣ ಮುಂದುವರೆಯುತ್ತಿರುವಾಗ ಮಗನ ಶಿಕ್ಷಣವನ್ನು ಹೇಗಾದರೂ ಮಾಡಿ ಮೊಟಕುಗೊಳಿಸಬೇಕೆಂಬ ಉದ್ದೇಶದಿಂದ ತಂದೆ ಪುನಗೌಡರು ಒಂದು ಉಪಾಯ ಮಾಡುತ್ತಾರೆ. ಅದಕ್ಕೆ ಮಗನ ಮದುವೆಯ ಸಿದ್ಧತೆಯನ್ನು ನಡೆಸುತ್ತಾರೆ. ಈ ವಿಷಯವನ್ನು ಅರಿತ ಮಲ್ಲನಗೌಡರು ಮದುವೆಯನ್ನು ಧಿಃಕ್ಕರಿಸಿ ಸಂಕೇಶ್ವರದಿಂದ ಕೊಲ್ಲಾಪುರಕ್ಕೆ ಪ್ರಯಾಣ ಬೆಳೆಸುತ್ತಾರೆ. ತಂದೆತಾಯಿಯವರಿಗೆ ಮತ್ತು ಸಂಬಂಧಿಕರಿಗೆ ಈ ವಿಷಯ ಹೇಗೋ ಗೊತ್ತಾಗಿ ಕೊಲ್ಲಾಪುರದಿಂದ ಎಂ. ಪಿ. ಪಾಟೀಲರನ್ನು ಹುಡುಕಿ ಕರೆದುಕೊಂಡು ಬರುತ್ತಾರೆ. ಅದು ಒಂದು ಶರತ್ತಿನ ಮೇಲೆ. ಮದುವೆಯಾದ ಮೇಲೆ ಶಿಕ್ಷಣವನ್ನು ಮುಂದುವರೆಸಲು ಅವಕಾಶ ಮಾಡಿಕೊಡಬೇಕೆಂದು. ಅದರಂತೆ ಪುನಗೌಡರು ಒಪ್ಪಿಕೊಂಡು ಮಗ ಮಲ್ಲನಗೌಡರ ವಿವಾಹ ಮಾಡುತ್ತಾರೆ. ಕೊಟ್ಟ ಮಾತಿನಂತೆ ಪುನಗೌಡರು ೪೦ ಮೈಲಿ ಕಾಲ್ನಡಿಗೆಯ ಮೂಲಕ ಪ್ರಯಾಣ ಕೈಕೊಂಡು ಮಗನನ್ನು ಮುಂದಿನ ಅಭ್ಯಾಸಕ್ಕಾಗಿ ಕೊಲ್ಲಾಪುರದಲ್ಲಿ ಬಿಟ್ಟು ಬರುತ್ತಾರೆ. ಮಲ್ಲನಗೌಡರು ಕೊಲ್ಲಾಪುರದ 'ರಾಜಾರಾಮ ಹೈಸ್ಕೂಲಿನಲ್ಲಿ ಪ್ರವೇಶ ಪಡೆಯುತ್ತಾರೆ'[೬]. ಅಲ್ಲಿಯ ವೀರಶೈವ ಬೋರ್ಡಿಂಗನಲ್ಲಿ ಉಳಿದುಕೊಂಡು ಶಿಕ್ಷಣವನ್ನು ಮುಂದುವರೆಸುತ್ತಾರೆ. ಅಲ್ಲಿ ಅವರು ಆ ಕಾಲದ ಮರಾಠಿ ಪತ್ರಿಕೆಗಳನ್ನು ಓದುವ ಹವ್ಯಾಸವನ್ನು ಬೆಳೆಸಿಕೊಳ್ಳುವುದರ ಜೊತೆಗೆ ಮರಾಠಿಯ ಪ್ರಸಿದ್ಧ ಕಾದಂಬರಿಗಳತ್ತ ತಮ್ಮ ಒಲವು ಹರಿಸುತ್ತಾರೆ. ಇವು ಅವರ ಜೀವನದಲ್ಲಿ ಸಾಕಷ್ಟು ಬದಲಾವಣೆಗಳನ್ನು ತರುವುದರ ಜೊತೆಗೆ ಶುದ್ಧರೂಪದಲ್ಲಿ ಮರಾಠಿ ಭಾಷೆಯನ್ನು ಕಲಿಯಲು ಸಹಾಯಕವಾಗುತ್ತದೆ.

ಈ ವೇಳೆಯಲ್ಲಿ ದೇಶದ ತುಂಬ ಸ್ವಾತಂತ್ರ್ಯದ ಕುರಿತಾದ ಚಳುವಳಿಗಳು, ಚಿಂತನೆಗಳು ಆರಂಭವಾಗಿದ್ದವು. ಮಹಾರಾಷ್ಟ್ರದಲ್ಲಿಯೂ ಅದರ ಕಾವು

ತೀವ್ರಗೊಳ್ಳುತ್ತಿತ್ತು. ಈ ಸಂಧರ್ಭದಲ್ಲಿ ಮರಾಠಿ ಪತ್ರಿಕೆಯ ಕೆಲವೊಂದು ಲೇಖನಗಳು ಮಲ್ಲನಗೌಡರ ಮನಸ್ಸಿನ ಮೇಲೆ ಆಳವಾದ ಪ್ರಭಾವವನ್ನು ಬೀರಿ ಅದರತ್ತ ಅವರ ಮನಸ್ಸನ್ನು ಆಕರ್ಷಿಸುತ್ತವೆ. ಅಂದಿನಿಂದಲೇ ಸ್ವತಂತ್ರ ಭಾರತದ ಕನಸಿನ ಕುಡಿ ಆ ಪುಟ್ಟ ಹೃದಯದಲ್ಲಿ ಮೊಳೆಯಿತು. ಸ್ವಾತಂತ್ರ್ಯ ಚಳುವಳಿಯತ್ತ ಲಕ್ಷ ಹರಿಸಲು, ಆ ದಿಸೆಯಲ್ಲಿ ಕಾರ್ಯಪ್ರವೃತ್ತಗೊಳ್ಳಲು ಪ್ರೇರಣೆ ನೀಡಿತು. ಅಭ್ಯಂಕರ ಮತ್ತು ಅಠಲ್ಯಾ ಮಾಸ್ತರರ ಸೂಕ್ತ ಮಾರ್ಗದರ್ಶನದಲ್ಲಿ ಮಲ್ಲನಗೌಡರ ಶೈಕ್ಷಣಿಕ ಯಾತ್ರೆಯು ಕೊಲ್ಲಾಪೂರದಂತಹ ಮರಾಠಿ ಪರಿಸರದಲ್ಲಿ ಯಾವುದೇ ತೊಂದರೆ ಇಲ್ಲದೇ ನಿರಾತಂಕವಾಗಿ ಮುಂದುವರೆಯುತ್ತದೆ. ಭಾಷೆ ಸಂಸ್ಕೃತಿಗಳ ಗಡಿಯನ್ನು ಮೀರಿ ಮಲ್ಲನಗೌಡರು ಬೆಳೆಯುತ್ತಾರೆ. '೧೯೧೮ರ ಮೇ ತಿಂಗಳಲ್ಲಿ ನಡೆದ ಮ್ಯಾಟ್ರಿಕ್ ಪರೀಕ್ಷೆಯಲ್ಲಿ ೬೦೦ ಕ್ಕೆ ೩೩೩ ಅಂಕಗಳನ್ನು ಪಡೆದು'[೭] ಹೆತ್ತವರಿಗೆ ವಿದ್ಯೆ ನೀಡಿದ ಗುರುಗಳಿಗೆ ಸಹಾಯ ಮಾಡಿದ ಸ್ನೇಹಿತರಿಗೆ ಮತ್ತು ದಾನಿಗಳಿಗೆ ಮೇಲಾಗಿ ಸಂಕೇಶ್ವರಕ್ಕೆ ಕೀರ್ತಿ ತರುವದರ ಜೊತೆಗೆ ಪ್ರತಿಭಾವಂತ ವಿದ್ಯಾರ್ಥಿಯಾಗಿ ಎಂ. ಪಿ. ಪಾಟೀಲರು ಹೊರಹೊಮ್ಮುತ್ತಾರೆ.

ಮಲ್ಲನಗೌಡರಿಗೆ ಮುಂದೆ ಕಾಲೇಜು ಶಿಕ್ಷಣವನ್ನು ಕಲಿಯುವ ಹಂಬಲವಿದ್ದರೂ ಮನೆಯ ಆರ್ಥಿಕ ಪರಿಸ್ಥಿತಿ ಕೆಟ್ಟುಹೋಗಿತ್ತು. ಆದರೂ ಎದೆಗುಂದದ ಮಲ್ಲನಗೌಡರು ಆದಮ್ಯ ವಿಶ್ವಾಸದೊಂದಿಗೆ ಕಾಲೇಜು ಶಿಕ್ಷಣವನ್ನು ಪಡೆಯುವ ನಿರ್ಧಾರ ಮಾಡುತ್ತಾರೆ. ಆ ಕಾಲದಲ್ಲಿ ನಮ್ಮ ಭಾಗದ ಜನರಿಗೆ ಕಾಲೇಜು ಶಿಕ್ಷಣ ಕೊಲ್ಲಾಪೂರದಲ್ಲಿಯೆ ದೊರೆಯುತಿದ್ದರಿಂದ ಮತ್ತೇ ಕೊಲ್ಲಾಪುರಕ್ಕೆ ಪ್ರಯಾಣ ಬೆಳಸುತ್ತಾರೆ. 'ಜೂನ ೨೦ನೇ ತಾರಿಖದಂದು ಕೊಲ್ಲಾಪುರದ ಪ್ರಿವ್ಹಿಯಸ್ ಕಾಲೇಜಿನಲ್ಲಿ ಪ್ರವೇಶ ಪಡೆದು ಅತಿ ಹುಮ್ಮಸಿನಿಂದ ವಿದ್ಯಾಭ್ಯಾಸವನ್ನು ಮುಂದುವರೆಸುತ್ತಾರೆ'[೮]. ಹಲವಾರು ಕನಸುಗಳನ್ನು ಕಟ್ಟಿಕೊಂಡು ಅದೇ ಚಿಂತನೆಯಲ್ಲಿ ಕಾಲೇಜು ಶಿಕ್ಷಣವನ್ನು ಪಡೆಯುತ್ತಿರುವಾಗ ತಾಯಿ ಗಂಗೂಬಾಯಿಯವರು ತೀರಿಹೋಗುತ್ತಾರೆ. ತಾಯಿ ತೀರಿಹೋದ ವಿಷಯ ಕೇಳಿ ಎಂ. ಪಿ. ಪಾಟೀಲರು ತುಂಬ ಗದ್ಗದಿತರಾಗಿ ಕೊಲ್ಲಾಪುರದಿಂದ ಸಂಕೇಶ್ವರಕ್ಕೆ ಪ್ರಯಾಣ ಬೆಳೆಸುತ್ತಾರೆ. ಕೊನೆಯಬಾರಿ ತಾಯಿಯ ಮುಖದರ್ಶನ ಪಡೆಯಲು ಎಂ. ಪಿ. ಪಾಟೀಲರು ಬಹಳ ಆತುರದಿಂದ ಬರುತ್ತಾರೆ. ಆದರೆ ಸಮಯಕ್ಕೆ ಸರಿಯಾಗಿ ಬರಲಿಲ್ಲಿವಾಗಿ, ಅದು ಈಡರದೇ ಹೋದಾಗಿನ ದು:ಖದ ಸ್ಥಿತಿಯನ್ನು ವರ್ಣಿಸಲು ಅಸಾಧ್ಯ. ಆದರೂ ಆ ದುಖಃವನ್ನು ನುಂಗಿಕೊಂಡು ಮುಂದಿನ ಕಾರ್ಯಕ್ಕೆ ತಂದೆಯೊಂದಿಗೆ ಅನುವಾಗುತ್ತಾರೆ. ಪತ್ನಿಯ ಸಾವಿನಿಂದ ದುಖಃತರಾಗಿದ್ದ ಮುನಗೌಡರು ಅದೇ ಕೊರಗಿನಲ್ಲಿ ಕಾಯಿಲೆ ಬಿಳುತ್ತಾರೆ. ಅವರನ್ನಾದರೂ

ಉಳಿಸಿಕೊಳ್ಳಬೇಕೆಂದು ನಿರಂತರ ಹೋರಾಟಮಾಡಿದ ಎಂ. ಪಿ. ಪಾಟೀಲರಿಗೆ ಸಿಕ್ಕಿದ್ದು ಅವರ ಸಾವು. ಹೀಗೆ ಎಂ. ಪಿ. ಪಾಟೀಲರು ಜೀವನದ ಪ್ರಾರಂಭಿಕ ಹಂತವಾದ ತಾರುಣ್ಯಾವಸ್ಥೆಯಲ್ಲಿ ತಂದೆ-ತಾಯಿಗಳಿಬ್ಬರನ್ನೂ ಕಳೆದುಕೊಂಡು ತಬ್ಬಲಿಗಳಾಗುತ್ತಾರೆ. ಮನೆಯ ಜವಾಬ್ದಾರಿಯ ಜೊತೆಗೆ ಹೆಂಡತಿ ಮತ್ತು ತಂಗಿಯನ್ನು ಸಾಕುವ ಜವಾಬ್ದಾರಿಯು ಇವರ ಹೆಗಲಮೇಲೆಯೇ ಬೀಳುತ್ತದೆ. ಆದ್ದರಿಂದ ಶಿಕ್ಷಣವನ್ನು ಅರ್ಧಕ್ಕೆ ನಿಲ್ಲಿಸಿ ಹೆಂಡತಿ ಮತ್ತು ತಂಗಿಯ ಜೊತೆ ಊರಿನಲ್ಲಿ ಇದ್ದುಕೊಂಡು ತಮ್ಮ ಜಮೀನಿನಲ್ಲಿ ಕೃಷಿಕಾರ್ಯವನ್ನು ಆರಂಭಿಸುತ್ತಾರೆ. ಇದಕ್ಕೆ ಬಲವಾದ ಕಾರಣವೂ ಇತ್ತು. ತಂದೆ ಮಾಡಿದ ಸಾಲ, ಅದನ್ನು ತೀರಿಸಲೇ ಬೇಕಾದ ಅನಿವಾರ್ಯತೆ ಇರುವುದರಿಂದ ಎಂ. ಪಿ. ಪಾಟೀಲರು ಒಮ್ಮೆ ಈ ನಿರ್ಧಾರ ಮಾಡುತ್ತಾರೆ. ಇನ್ನೊಮ್ಮೆ ಅರ್ಧಕ್ಕೆ ನಿಂತಿದ್ದ ಶಿಕ್ಷಣವನ್ನು ಪೂರ್ಣಗೊಳಿಸಲೇಬೇಕೆಂಬ ನಿರ್ಧಾರ ಮಾಡಿ ತಮ್ಮ ಜಮೀನನ್ನು ಗೇಣಿಯ ಆಧಾರದ ಮೇಲೆ ತಮ್ಮ ಚಿಕ್ಕಪ್ಪನಿಗೆ ಉಳಿಮೆ ಮಾಡಲು ಕೊಟ್ಟು ಕೊಲ್ಲಾಪುರಕ್ಕೆ ಹೊರಡುತ್ತಾರೆ. ಹಣಕಾಸಿನ ತೊಂದರೆಯಿಂದ ಧೃತಿಗೆಡದೆ ದಾನಿಗಳ, ಆಪ್ತರ ಸಹಾಯದಿಂದ ಶಿಕ್ಷಣವನ್ನು ಮುಂದುವರೆಸುತ್ತಾರೆ. ಕೆಲವು ದಿನ ಕಳೆದ ಮೇಲೆ ಇಂಟರ್ ಮೀಡಿಯೇಟ್ ಪರೀಕ್ಷೆ ಪಾಸಾಗಿ ಕೊಲ್ಲಾಪೂರದ ಶೈಕ್ಷಣಿಕ ಜೀವನಕ್ಕೆ ವಿದಾಯ ಹೇಳುವುದರ ಮೂಲಕ ಕಾಲೇಜು ಶಿಕ್ಷಣವನ್ನು ಪೂರ್ಣಗೊಳಿಸುತ್ತಾರೆ.

**ಉನ್ನತ ವ್ಯಾಸಂಗ :**

ಕೊಲ್ಲಾಪುರದ ಶೈಕ್ಷಣಿಕ ಯಾತ್ರೆಯನ್ನು ಪೂರ್ಣಗೊಳಿಸಿದ ಎಂ. ಪಿ. ಪಾಟೀಲರು ಉನ್ನತ ಶಿಕ್ಷಣ ಪಡೆಯುವ ವಿಚಾರ ಮಾಡುತ್ತಾರೆ. ಆ ಕಾಲದಲ್ಲಿ ಉನ್ನತ ಶಿಕ್ಷಣದ ವ್ಯವಸ್ಥೆ ಕೊಲ್ಲಾಪುರದಲ್ಲಿ ಇರಲಿಲ್ಲವಾದ್ದರಿಂದ ಪುಣೆಗೆ ಹೋಗಲು ನಿರ್ಧರಿಸುತ್ತಾರೆ. ಆ ಕಾಲದಲ್ಲಿ ಪುಣೆಯು ಉನ್ನತ ಶಿಕ್ಷಣದ ಪ್ರಮುಖ ಕೇಂದ್ರವಾಗಿತ್ತು. ಹೀಗಾಗಿ ಎಂ. ಪಿ. ಪಾಟೀಲರು ಪುಣೆಯ 'ಫರಗ್ಯೂಸನ್ ಕಾಲೇಜಿನಲ್ಲಿ' ಬಿ.ಎ. ಪದವಿಗೆ ಪ್ರವೇಶ ಪಡೆಯುತ್ತಾರೆ. ನಿರಂತರ ಅಧ್ಯಯನದಲ್ಲಿ ತಮ್ಮನ್ನು ತೊಡಗಿಸಿಕೊಂಡು, ಒಮ್ಮೊಮ್ಮೆ ಊರಕಡೆಗೂ ಬಂದು ಹೋಗಿ ಮನೆ ಮತ್ತು ಕಾಲೇಜ ಎರಡನ್ನು ನಿಭಾಯಿಸ ತೊಡಗುತ್ತಾರೆ.

ಪುಣೆಯಲ್ಲಿ ಮರಾಠಿ ಶಿಕ್ಷಣ ಪಡೆಯುವದರ ಜೊತೆಗೆ ಹೊಸ ಹೊಸ ವಿಚಾರಗಳತ್ತ ತಮ್ಮ ಮನಸ್ಸನ್ನು ಹರಿಬಿಡುತ್ತಾರೆ. ಕೆಲವು ಪ್ರಮುಖ ಮರಾಠಿ ನಾಯಕರ ಬರವಣಿಗೆಗಳಿಂದ ಆಕರ್ಷಿತರಾಗುತ್ತಾರೆ. ಜೊತೆಯಲ್ಲಿಯೇ ಪುಣೆಯ ಪ್ರಾದೇಶಿಕ ಸಂಸ್ಕೃತಿ, ಐತಿಹಾಸಿಕ ಸ್ಥಳಗಳ ಮಹಿಮೆಯ ಕುರಿತು ಲೇಖನ ಬರೆಯುವುದರ

ಮೂಲಕ ಅವುಗಳನ್ನು ಪ್ರಚಾರಗೊಳಿಸುತ್ತಾರೆ. ‘೧೯೨೨ರ ಮೇ ತಿಂಗಳಲ್ಲಿ ಬಿ.ಎ. ಪದವಿಯನ್ನು ಪಾಸಾಗುವುದರ ಮೂಲಕ ಪುಣೆಯ ಶಿಕ್ಷಣವನ್ನು ಸಂಪೂರ್ಣಗೊಳಿಸುತ್ತಾರೆ’[೯].

ಮುಂದೆ ಎಂ.ಎ. ಕಲಿತು ಒಬ್ಬ ಉತ್ತಮ ಪ್ರಾಧ್ಯಾಪಕನಾಗಬೇಕೆಂಬ ಆಸೆಯಿಂದ ಆ ನಿಟ್ಟಿನಲ್ಲಿ ಕಾರ್ಯತತ್ಪರರಾಗುತ್ತಾರೆ. ಆದರೆ ವಿಧಿಯ ಮುಂದೆ ಯಾರೂ ದೊಡ್ಡವರಲ್ಲ ಎಂಬ ಮಾತಿನಂತೆ ಆ ಕಾಲದಲ್ಲಿ ಎಂ.ಎ. ಶಿಕ್ಷಣವನ್ನು ಪಡೆಯುವುದು ಅಷ್ಟು ಸುಲಭದ ಮಾತಾಗಿರಲಿಲ್ಲವಾದ್ದರಿಂದ ಅದರ ಆಲೋಚನೆಯನ್ನು ಬಿಟ್ಟು ‘ಹೊಟ್ಟೆ ಹೊರೆದುಕೊಂಡು ಸಾರ್ವಜನಿಕ ಕೆಲಸದಲ್ಲಿ ತೊಡಗಲಿಕ್ಕೆ ಆಸ್ಪದವುಳ್ಳ ಎರಡನೇ ಮಾರ್ಗವೆಂದು ಇಷ್ಟವಿಲ್ಲದಿದ್ದರೂ ಕಾನೂನು ಪದವಿಯನ್ನು ಆಯ್ಕೆಮಾಡಿಕೊಳ್ಳುತ್ತಾರೆ[೧೦]. ಸಂಕೇಶ್ವರದ ಹಿರಿಯರಾದ ಅಣ್ಣಾಸಾಹೇಬ ಪಾಟೀಲರು ಸಹಾಯ ಮಾಡುವ ಭರವಸೆಯನ್ನು ಕೊಡುತ್ತಾರೆ. ಅವರ ಸಲಹೆಯಂತೆ ಕಾನೂನು ಪದವಿ ಪಡೆಯಬೇಕೆಂದು ಬೊಂಬಾಯಿಗೆ ತೆರಳುತ್ತಾರೆ. ಕಾನೂನು ಪದವಿಗೆ ಪ್ರವೇಶ ಪಡೆದ ಎಂ. ಪಿ. ಪಾಟೀಲರು ನಿರಂತರ ಪರಿಶ್ರಮದ ಮೂಲಕ ‘೧೯೨೪ ರಲ್ಲಿ ಕಾನೂನು ಪರೀಕ್ಷೆಯಲ್ಲಿ ತೇರ್ಗಡೆಯಾಗುತ್ತಾರೆ[೧೧].

ಹೀಗೆ ಇಡಿಯಾದ ಶೈಕ್ಷಣಿಕ ಜೀವನದುದ್ದಕ್ಕೂ ಕಷ್ಟಗಳ ಸರಮಾಲೆಯನ್ನು ಹೊತ್ತುಕೊಂಡು ತಂದೆ-ತಾಯಿಗಳನ್ನು ಕಳೆದುಕೊಂಡರೂ ಸಹ ಯಾವುದೇ ಸಂಗತಿಯಿಂದ ವಿಚಲಿತರಾಗದೆ ಶಿಕ್ಷಣವನ್ನು ಪಡೆದಿದ್ದು ನಿಜಕ್ಕೂ ಅದ್ಭುತವೆನಿಸುತ್ತದೆ. ಶಿಕ್ಷಣ ಪಡೆದು ಮರಳಿ ಸಂಕೇಶ್ವಕರಕ್ಕೆ ಬಂದ ಮೇಲೆ ಮಲ್ಲನಗೌಡರ ಸಾಹಸದ ವಿದ್ಯಾರ್ಜನೆಯನ್ನು ಮೆಚ್ಚಿ ಊರ ಹಿರಿಯರೆ ಕೂಡಿಕೊಂಡು ಸತ್ಕಾರ ಸಮಾರಂಭವನ್ನು ಏರ್ಪಡಿಸುತ್ತಾರೆ[೧೨]. ಅಕ್ಷರದ ಹಸಿವಿಗಾಗಿ ಬಡತನ ಎಷ್ಟೇ ಅಡ್ಡಿ ಪಡಿಸಿದರು ಅವೆಲ್ಲವನ್ನು ನುಂಗಿಕೊಂಡು ಜೀವನದಲ್ಲಿ ಅಂದುಕೊಂಡಿದ್ದನ್ನು ಸಾಧಿಸಿ ತೋರಿಸಿದ ಕೀರ್ತಿ ಎಂ. ಪಿ. ಪಾಟೀಲರಿಗೆ ಸಲ್ಲುತ್ತದೆ.

**೨.೨ ಕೌಟುಂಬಿಕ ಜೀವನ:**

ಎಂ. ಪಿ. ಪಾಟೀಲರಿಗೆ ೧೩ ವರ್ಷ ತುಂಬಿದಾಗ ತಂದೆ ಪುನಗೌಡರು, ತಾಯಿ ಗಂಗೂಬಾಯಿಯವರು ಒಂದು ನಿರ್ಧಾರಕ್ಕೆ ಬರುತ್ತಾರೆ. ಮಗನ ಶಿಕ್ಷಣದ ಹುಚ್ಚನ್ನು ಬಿಡಿಸಿ ಮನೆಯಲ್ಲಿ ಇಟ್ಟುಕೊಳ್ಳಲು ಇರುವುದೊಂದೆ ಉಪಾಯ ಅದು ವಿವಾಹ ಮಾಡಿಸುವುದೆಂದು ತೀರ್ಮಾನಿಸಿ ಮಲ್ಲನಗೌಡರಿಗೆ ವಿವಾಹ ಮಾಡುವ ಸಿದ್ಧತೆಯಲ್ಲಿ ತೊಡಗುತ್ತಾರೆ. ಪುನಗೌಡರ ಮೊದಲನೆ ಹೆಂಡತಿಯ ಸಂಬಂಧಿಕರಾದ

ನೇರ್ಲಿ ಗ್ರಾಮದ 'ಚೂಡಪ್ಪ ಗೌಡರ ಮಗಳಾದ ಲಕ್ಷ್ಮಿ ಎಂಬ ಕನ್ಯೆಯೊಂದಿಗೆ ವಿವಾಹವನ್ನು ನಿಶ್ಚಯಿಸುತ್ತಾರೆ[೧೩]. ಈ ವಿಷಯ ಮಲ್ಲನಗೌಡರಿಗೆ ಹೇಗೋ ಗೊತ್ತಾಗಿ ಮನೆ ಬಿಟ್ಟು ಕೊಲ್ಲಾಪುರಕ್ಕೆ ಹೊಗುತ್ತಾರೆ. ತಮ್ಮ ಮಗ ಕೊಲ್ಲಾಪುರಕ್ಕೆ ಹೋಗಿದ್ದಾನೆಂದು ಒಬ್ಬ ವ್ಯಕ್ತಿಯಿಂದ ತಿಳಿದುಕೊಂಡ ಪುನಗೌಡರು ಕೊಲ್ಲಾಪುರಕ್ಕೆ ತೆರಳುತ್ತಾರೆ. ಮಲ್ಲನಗೌಡರು ತಂದೆಗೆ, "ನನಗೆ ಮುಂದಿನ ಶಿಕ್ಷಣಕ್ಕೆ ಅನುವುಮಾಡಿಕೊಟ್ಟರೆ ಮಾತ್ರ ವಿವಾಹವಾಗುತ್ತೇನೆ". ಎಂಬ ಶರತ್ತಿನೊಂದಿಗೆ ಮರಳಿ ಸಂಕೇಶ್ವರಕ್ಕೆ ಬರುತ್ತಾರೆ. ಹಿರಿಯರೆಲ್ಲರು ನಿಶ್ಚಯಿಸಿದಂತೆ ಮಲ್ಲನಗೌಡರಿಗೆ ಲಕ್ಷ್ಮೀಯೊಂದಿಗೆ ವಿವಾಹ ಮಾಡುತ್ತಾರೆ.

ಸಾಂಸಾರಿಕ ಜೀವನದ ಮಧ್ಯೆಯೇ ಶಿಕ್ಷಣವನ್ನು ಮುಂದುವರೆಸುತ್ತಿರುವಾಗ ಪ್ಲೇಗ ಎಂಬ ಮಹಾಮಾರಿಗೆ ತಂದೆ-ತಾಯಿಗಳಿಬ್ಬರನ್ನು ಕಳೆದುಕೊಂಡು ಮಲ್ಲನಗೌಡರು ಅನಾಥರಾಗುತ್ತಾರೆ. ಆದರೂ ಆ ಚಿಕ್ಕ ವಯಸ್ಸಿನಲ್ಲಿ ಎದೆಗುಂದದ ಮಲ್ಲನಗೌಡರು ಹೆಂಡತಿ ಮತ್ತು ಸಹೋದರಿಯನ್ನು ತಮ್ಮ ಸೋದರ ಮಾವನ ಮನೆ ಅಂದರೆ ಹೆಂಡತಿಯ ತವರು ಮನೆಯಲ್ಲಿಯೇ ಇಡುತ್ತಾರೆ. ಇತ್ತ ತಂದೆ ಮಾಡಿದ ಸಾಲ ಒಂದು ಕಡೆಯಾದರೆ ಹೆಂಡತಿ-ಸಹೋದರಿಯನ್ನು ನಿರ್ಗತಿಕರನ್ನಾಗಿ ಮಾಡುತ್ತಿದ್ದೇನಲ್ಲ ಎಂಬುದು. ಇನ್ನೊಂದು ಕಡೆಯಾಗಿ ಅವರ ಮನಸ್ಸನ್ನು ಕಾಡತೊಡಗುತ್ತದೆ. ಅದೆಲ್ಲವನ್ನು ಧಿಃಕ್ಕರಿಸಿದ ಮಲ್ಲನಗೌಡರು ಪುಣೆ ಹಾಗೂ ಬೊಂಬಾಯಿ ನಗರಗಳಿಗೆ ಉನ್ನತ ಶಿಕ್ಷಣವನ್ನು ಪಡೆಯಲು ಹೊರಡುತ್ತಾರೆ. ಮಲ್ಲನಗೌಡರು ಪುಣೆಯಲ್ಲಿ ಶಿಕ್ಷಣ ಪಡೆಯುತ್ತಿರುವ ಸಂದರ್ಭದಲ್ಲಿ ಅವರ ಸಹೋದರಿಗೂ ಪ್ಲೇಗ ರೋಗ ಬರುತ್ತದೆ. ಅವಳನ್ನು ಕಳೆದುಕೊಳ್ಳುತ್ತೇನೆಂಬ ಭೀತಿ ಎಂ. ಪಿ. ಪಾಟೀಲರಿಗಿತ್ತು. ಸುದೈವವಶಾತ ಆ ರೋಗದಿಂದ ಸಹೋದರಿ ಮುಕ್ತಳಾಗುತ್ತಾಳೆ. ಆದರೆ ಈ ಸಮಯದಲ್ಲಿ ಸಂಬಂಧಿಕರ, ಸಾಲಗಾರರ ಕಾಟವಂತೂ ಹೇಳತಿರದಾಗಿತ್ತು. ಇತ್ತ ಗೇಣಿಗೆಂದು ಹಚ್ಚಿದ್ದ ಹೊಲದಲ್ಲಿ ನಿರೀಕ್ಷಿತ ಪ್ರಮಾಣದಲ್ಲಿ ಆದಾಯ ಬರದೇ ಇದ್ದಿದ್ದರಿಂದ ಸಂಸಾರ ನಡೆಸುವುದು ದುಸ್ತರವಾಗಿತ್ತು. "ಪ್ರತಿಯೊಬ್ಬ ಯಶಸ್ವಿ ಪುರುಷನ ಹಿಂದೆ ಮಹಿಳೆಯ ಪಾಲು" ಇರುತ್ತದೆ ಎಂಬ ಗಾದೆ ಮಾತಿನಂತೆ ಪತಿಯೇ ಪರದೈವ ಎಂದು ಗಂಡನಿಗೆ ತಕ್ಕ ಹೆಂಡತಿಯಾಗಿ ಸಂಸಾರದ ರಥವನ್ನು ಎಳೆಯಲು ಲಕ್ಷ್ಮೀಬಾಯಿಯವರು ಗಂಡನಿಗೆ ಸಹಕರಿಸಿದ ಒಂದು ಪ್ರಸಂಗವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಅದು ಈ ಸಂದರ್ಭಕ್ಕೆ ಸೂಕ್ತವಾಗಿದೆ. ಸಾಲಗಾರರ ಕಾಟ ಅತಿಯಾದಾಗ ಹೆಂಡತಿ ತನ್ನ ಆಭರಣಗಳನ್ನು ಕೊಡಲು ಮುಂದೆ ಬರುತ್ತಾಳೆ.

"ಈ ಬಂಗಾರದ ಆಭರಣವು ನಿನ್ನವು. ಅವುಗಳನ್ನು ನಾನು ಹೇಗೆ ಮಾರಲಿ?" ಎಂದರು ಮಲ್ಲನಗೌಡರು.

"ಆಭರಣ ಇರುವದೇ ಕಷ್ಟ, ಆಪತ್ತು ಬಂದಾಗ ಮಾರಲು ಅಲ್ಲವೇ? ಈಗ ಮಾರಿಬಿಡಿರಿ".

"ನಿನಗೆ ಒಡವೆಗಳನ್ನು ನಾನಂತೂ ಮಾಡಿಸಿಕೊಡಲಿಲ್ಲ. ಈಗ ನಿನ್ನ ಆಭರಣ ಪಡೆದು ಸಾಲ ತೀರಿಸಲೇ?"

"ಈಗ ಸಾಲ ತೀರಿಸಲು ಇವುಗಳನ್ನು ತಗೊಳ್ಳಿ. ನಂತರ ಅನುಕೂಲವಾದಾಗ ನನಗೆ ಇದರ ಎರಡುಪಟ್ಟು ಕೊಡಬಹುದು. ಆಗ ನಾನು ಬೇಡವೆನ್ನುವದಿಲ್ಲ".

"ಮುಂದೆ ಅಂತಹ ಅನುಕೂಲ ಒದಗದೇ ಹೋದರೆ ಹೇಗೆ"

"ಆಗದಿದ್ದರೆ ಆಗಲಿಲ್ಲ. ಅವುಗಳನ್ನು ತಿನ್ನಲು ಬರುತ್ತದೆಯೇ?"[೧೮] ಎಂದು ಗಂಡನ ಮಾತಿಗೆ ಪ್ರತಿಕ್ರಿಯಿಸಿದ ಆ ಮಹಾತಾಯಿಯ ಗುಣ ಇನ್ನುಳಿದ ಮಹಿಳೆಯರಿಗೆ ಒಂದು ಮಾದರಿ. ಲಕ್ಷ್ಮೀಬಾಯಿ ಗಂಡನ ನೋವಿನಲ್ಲಿ, ಸಂತೋಷದಲ್ಲಿ ಸಮಪಾಲನ್ನು ಪಡೆದು ಸಹಬಾಳ್ವೆಯನ್ನು ನಡೆಸುವುದರ ಜೊತೆಗೆ ಗಂಡನ ಅಭ್ಯುದಯಕ್ಕೆ ತಮ್ಮ ಜೀವನವನ್ನು ಮುಡುಪಾಗಿಡುತ್ತಾರೆ.

**ವೃತ್ತಿ ಜೀವನ:**

ಕಷ್ಟಮಯವಾದ ಬದುಕಿನ ನಡುವೆಯೇ ಎಂ. ಪಿ. ಪಾಟೀಲರು ಕೊಲ್ಹಾಪುರ, ಪುಣೆ, ಬೊಂಬಾಯಿಗಳಲ್ಲಿ ತಮ್ಮ ಶಿಕ್ಷಣವನ್ನು ಪೂರೈಸಿಕೊಂಡು ಮರಳಿ ಸಂಕೇಶ್ವರಕ್ಕೆ ಬರುತ್ತಾರೆ. ಮನೆಯ ಪರಿಸ್ಥಿತಿಯಂತೂ ಅಷ್ಟಕಷ್ಟೇ ಇರುತ್ತದೆ. ಮೇಲಾಗಿ ಹೆಂಡತಿ ಮತ್ತು ತಾವು ಮಾವನ ಮನೆಯಲ್ಲಿ ಇದ್ದುದರಿಂದ ಸ್ವತಂತ್ರವಾದ ಬದುಕು ಅನ್ನುವುದು ಇರಲಿಲ್ಲ. ಆದ್ದರಿಂದ ದುಡಿಮೆಗೆ ತೊಡಗುವ ಯೋಚನೆ ಮಾಡುತ್ತಾರೆ. ಕಾನೂನು ಪದವಿಯನ್ನು ಮುಗಿಸಿದ ಎಂ. ಪಿ. ಪಾಟೀಲರಿಗೆ ವಕೀಲ ವೃತ್ತಿ ಕೈಗೊಳ್ಳಲು ಹುಕ್ಕೇರಿ ಮತ್ತು ಬೆಳಗಾವಿ ಇವೆರಡರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾಗಿರುತ್ತದೆ. ಆಗ ಹುಕ್ಕೇರಿಯಲ್ಲಿಯೇ ವಕೀಲಿ ವೃತ್ತಿಯನ್ನು ಕೈಗೊಳ್ಳಬೇಕೆಂಬ ನಿರ್ಧಾರ ಮಾಡಿ '೧೯೨೪ ರಲ್ಲಿ ತಮ್ಮ ಸೇವೆಯನ್ನು ಹುಕ್ಕೇರಿಯ ಕೋರ್ಟಿನಲ್ಲಿ ಪ್ರಾರಂಭಿಸುತ್ತಾರೆ'[೧೯]. ವೃತ್ತಿ ಜೀವನದ ಅನುಭವವನ್ನು ಪಡೆಯುತ್ತ ಹೆಚ್ಚು ಹೆಚ್ಚು ಕೇಸುಗಳನ್ನು ಪಡೆದು ಅದರಲ್ಲಿ ವಿಜಯಿ ಆಗುತ್ತ ಮುನ್ನಡೆಯುತ್ತಾರೆ. ಅತ್ಯಂತ ಕಡಿಮೆ ಅವಧಿಯಲ್ಲಿ ಸಾಕಷ್ಟು ಜನಪ್ರಿಯತೆಯನ್ನು ಹೊಂದುತ್ತಾರೆ. ಅದರ ಒಂದು ಪ್ರಸಂಗ ಹೀಗಿದೆ. 'ಬೊಂಬಾಯಿಗೆ ಹೋಗಿ ಕಾನವಿಕೇಶನ್ ತರಲು ಬಸ್ಸಿನ ಚಾರ್ಜಕೂಡ ಇಲ್ಲದ ಎಂ. ಪಿ. ಪಾಟೀಲರು ಒಂದೆರಡು ತಿಂಗಳಲ್ಲಿಯೇ

ನಾಲ್ಕುನೂರು ರೂಪಾಯಿ ಹಣವನ್ನು ಸಂಪಾದಿಸಿ ಕಾನ್ವಿಕೇಷನ ಪಡೆದುಕೊಂಡು ಬರುತ್ತಾರೆ. ಈ ಘಟನೆಯು ಅವರ ಜೀವನದಲ್ಲಿ ಅವಿಸ್ಮರಣೀಯವಾಗಿದೆ. ವಕೀಲಿ ವೃತ್ತಿಯಲ್ಲಿ ಒಳ್ಳೆಯ ಸಂಪಾದನೆಯನ್ನು ಮಾಡುತ್ತಾ ಎಲ್ಲ ವರ್ಗದ ಜನರನ್ನು ಆತ್ಮೀಯತೆಯ ಭಾವದಿಂದ ಕಾಣುತ್ತಾರೆ. ಅವರ ಒಡನಾಡಿಯಾಗಿ ಅವರಲ್ಲಿಯ ಸಮಸ್ಯೆಗಳನ್ನು ಒಂದೊಂದಾಗಿ ಪರಿಹರಿಸುತ್ತಾರೆ. ಅತಿ ಕಡಿಮೆ ಅವಧಿಯಲ್ಲಿಯೆ ವಕೀಲಿ ಕ್ಷೇತ್ರದಲ್ಲಿ ಜನಪ್ರಿಯತೆಯನ್ನು ಪಡೆಯುತ್ತಾರೆ. ತಂದೆ ಮಾಡಿದ ಸಾಲ, ತಾವು ಶಿಕ್ಷಣಕ್ಕಾಗಿ ಮಾಡಿದ ಸಾಲವನ್ನು ಬಡ್ಡಿ ಸಮೇತವಾಗಿ ತೀರಿಸುತ್ತಾರೆ. ಮಾವನ ಮನೆಯಲ್ಲಿದ್ದ ಹೆಂಡತಿ ಲಕ್ಷ್ಮೀಬಾಯಿಯವರನ್ನು ಕರೆದುಕೊಂಡು ಬಂದು ಹುಕ್ಕೇರಿಯಲ್ಲಿ ಮನೆ ಮಾಡಿ ಸ್ವತಂತ್ರ ಜೀವನ ಸಾಗಿಸಲು ಪ್ರಾರಂಭಿಸುತ್ತಾರೆ.

ಒಳ್ಳೆಯ ಆದಾಯ, ಜನರ ಪ್ರೀತಿ, ವಿಶ್ವಾಸಗಳಿಗೆ ಪಾತ್ರರಾದ ಎಂ. ಪಿ. ಪಾಟೀಲರು ಎಲ್ಲ ವಕೀಲರ ಬಳಗದಲ್ಲಿ ಉತ್ತಮ ನ್ಯಾಯವಾದಿಗಳಾಗಿ ಹೊರಹೊಮ್ಮುತ್ತಾರೆ. ಆ ಕಾಲದಲ್ಲಿ ಜಾತಿ ವ್ಯವಸ್ಥೆಯ ರೋಗ ಕಲಿತ ವರ್ಗದವರಲ್ಲಿಯೂ ಇದ್ದಿದ್ದರಿಂದ ಬ್ರಾಹ್ಮಣ ಮತ್ತು ಬ್ರಾಹ್ಮಣೇತರರು ಎಂದು ಎರಡು ಪಂಗಡಗಳು ನಿರ್ಮಾಣವಾಗಿರುತ್ತವೆ. ಬ್ರಾಹ್ಮಣೇತರ ವಕೀಲರ ಗುಂಪಿನ ನಾಯಕರೆಂದು ಎಂ. ಪಿ. ಪಾಟೀಲರು ಪ್ರಸಿದ್ಧಿ ಪಡೆದಿದ್ದರು.

ನ್ಯಾಯ ಕೊಡಿಸಿ ಎಂದು ಮನೆಗೆ ಬಂದ ಕಕ್ಷಿದಾದರಿಗೆ ನ್ಯಾಯವನ್ನು ಒದಗಿಸಿ ಅವರ ಬದುಕಿನ ಕತ್ತಲೆಯನ್ನು ದೂರು ಮಾಡಿದ ಜ್ಯೋತಿಯಾಗಿ ಎಂ. ಪಿ. ಪಾಟೀಲರು ಪ್ರಕಾಶಿಸುತ್ತಾರೆ. ಇದಕ್ಕೆ ಬಲವಾದ ಕಾರಣವೂ ಇದೆ. ಅದೇನೆಂದರೆ ಅವರ ತಂದೆಗೆ ಜಮೀನಿನ ಖಟ್ಲೆಯಲ್ಲಿ ಆದಂತ ಪರಿಸ್ಥಿತಿ ಇತರೆ ಬಡವರ್ಗದವರಿಗೆ ಬರದಿರಲಿ ಎಂದು. ಹೀಗೆ ಜನತೆಯ ಕಲ್ಯಾಣದಲ್ಲಿ ತೊಡಗಿದ್ದ ಎಂ. ಪಿ. ಪಾಟೀಲರ ಪರಿಶ್ರಮ, ಪ್ರತಿಭೆಗೆ ಫಲಪ್ರದವಾಗಿ ಸರಕಾರಿ ವಕೀಲಿ ವೃತ್ತಿಯು ಇವರನ್ನು ಹುಡುಕಿಕೊಂಡು ಬಂದಿತು. ಅದನ್ನು ಅತಿ ವಿನಯದಿಂದ ಸ್ವೀಕರಿಸುತ್ತಾರೆ.

ಮೂರು ವರ್ಷಗಳ ವಕೀಲಿ ವೃತ್ತಿಯ ಅನುಭವದಲ್ಲಿ ಸಮಾಜಕ್ಕೆ ಅತಿ ಹತ್ತಿರವಾಗುತ್ತಾರೆ. ಜೊತೆಗೆ ಜನರ ಕಷ್ಟಗಳಿಗೆ ಸ್ಪಂದಿಸುತ್ತಾ ಜನನಾಯಕರಾಗಿ ಬೆಳೆಯತೊಡಗುತ್ತಾರೆ. ಸಾರ್ವಜನಿಕ ಜೀವನದಲ್ಲಿ ಬೆಳೆಯತೊಡಗಿದ ಎಂ. ಪಿ. ಪಾಟೀಲರ ಶಿಸ್ತು, ಪ್ರಾಮಾಣಿಕತೆ, ದಕ್ಷತೆ, ಎಲ್ಲರಿಗೂ ಪರಿಚಯವಾಗುತ್ತದೆ. ಆಗಿನ ಬೆಳಗಾವಿಯ ಕಲೆಕ್ಟರರಾಗಿದ್ದ ಶ್ರೀಯುತ ಜಿ. ಎ. ಹಿರೇಮಠ ಅವರು ಲಿಂಗಾಯತರಿಗಾಗಿ ಬೆಳಗಾವಿಯ ಪ್ರಾದೇಶಿಕ ಸೇನೆಯಲ್ಲಿ ಒಂದು ಕಂಪನಿಯನ್ನು ತೆರೆಯಬೇಕೆಂದು ಚಿಂತನೆಯಲ್ಲಿದ್ದರು. ಇದಕ್ಕೆ ಎಂ. ಪಿ. ಪಾಟೀಲರು ಸಮರ್ಥ ನಾಯಕನೆಂದು ಗುರುತಿಸುತ್ತಾರೆ. ಇವರನ್ನು ಹುಕ್ಕೇರಿ ತಾಲೂಕಿನ ಸೇನೆಯ

ಸಂಘಟಕರೆಂದು ನೇಮಕಮಾಡಿ, ಬೆಳಗಾವಿಯ ಪ್ರಾದೇಶಿಕ ಸೇನಾ ಶಾಖೆಯಲ್ಲಿ ಇವರಿಗೆ ತರಬೇತಿ ಕೊಡಿಸುತ್ತಾರೆ. ಭಾರತೀಯ ಸೇನೆಯ ಆ ಶಿಸ್ತು, ಆತ್ಮ ವಿಶ್ವಾಸ ಕಡಿಮೆ ಅವಧಿಯಲ್ಲಿ ಎಂ. ಪಿ. ಪಾಟೀಲರ ಮನಸನ್ನು ಸೆಳೆಯುತ್ತದೆ. ಯುವಕರನ್ನು ಕೂಡಿಸಿಕೊಂಡು ಸೈನ್ಯದ ಬಗ್ಗೆ ಜಾಗೃತಿ ಮೂಡಿಸುತ್ತಾರೆ. ವಿವಿಧ ಪ್ರದೇಶಗಳಿಗೆ ಭೇಟ್ಟಿ ಕೊಟ್ಟು ಯುವಕರನ್ನು ಸೇನೆಯಲ್ಲಿ ಪಾಲ್ಗೊಳ್ಳಲು ಹುರಿದುಂಬಿಸುತ್ತಾರೆ. ಇವರ ಈ ಪ್ರಾಮಾಣಿಕ ಸೇವೆಯನ್ನು ಕಂಡು ಸೇನೆಯ ಅಧಿಕಾರಿಗಳು ಸೈನ್ಯದಲ್ಲಿ ಅತ್ಯುತ್ತಮ ಪದವಿಯಾದ 'ಕಿಂಗ ಮೆಡಲ್'[೧೭] ಪದಪಿಯನ್ನು ನೀಡಿ ಗೌರವಿಸುತ್ತಾರೆ. ಇದು ಎಂ. ಪಿ. ಪಾಟೀಲರ ಸಾಧನೆಗೆ ಇನ್ನೊಂದು ಕಿರೀಟವಾಗಿದೆ.

ಸೇನೆಯ ಅಧಿಕಾರಿಗಳೊಂದಿಗೆ ಅನೋನ್ಯವಾದ ಸಂಬಂಧವನ್ನು ಬೆಳೆಸಿಕೊಂಡು ಸೇನೆಯು ನೀಡಿದ ಎಲ್ಲ ಕಾರ್ಯಗಳನ್ನು, ಜವಾಬ್ದಾರಿಗಳನ್ನು ಸಮರ್ಥವಾಗಿ ನಿಭಾಯಿಸುತ್ತಾರೆ. ತಮ್ಮ ಕಾರ್ಯದಕ್ಷತೆಯಿಂದ ಬ್ರಿಟೀಷ ಅಧಿಕಾರಿಗಳ ಪ್ರಶಂಸೆಗೆ ಪಾತ್ರರಾಗುತ್ತಾರೆ. 'ಮನುಷ್ಯ ಜೀವನದಲ್ಲಿ ಆಲಸ್ಯತನ'[೧೮] ಎನ್ನುವುದು ಒಂದು ರೋಗವಿದ್ದಂತೆ ಅದನ್ನು ದೂರಮಾಡಲು ಇರುವ ಎಕೈಕ ಅಸ್ತ್ರ ಶಿಸ್ತು. ಆ ಶಿಸ್ತನ್ನು ಎಂ. ಪಿ. ಪಾಟೀಲರು ಪಡೆದುಕೊಂಡ ಬಗೆಯನ್ನು ಹೇಳುತ್ತಾರೆ. ನಮ್ಮ ವೈಯಕ್ತಿಕ ಕಾರ್ಯಗಳು ಸಾಗಬೇಕಾದರೆ ಶಿಸ್ತಿನ ಪ್ರಾಮುಖ್ಯತೆಯನ್ನು ಕುರಿತು ವಿವರಿಸುತ್ತಾರೆ.

ಇವೆಲ್ಲದರ ಮಧ್ಯೆ ಬ್ರಿಟೀಷರ ಅಧೀನದಲ್ಲಿ ಕಾರ್ಯ ಮಾಡುವುದು ದೇಶದ್ರೋಹವೆಂದು ಮನಗಂಡು ಸೈನಿಕವೃತ್ತಿಗೆ ರಾಜೀನಾಮೆ ಕೊಡುವ ನಿರ್ಧಾರ ಮಾಡುತ್ತಾರೆ. ಅದರಂತೆ ರಾಜೀನಾಮೆಯನ್ನು ಕೊಡುತ್ತಾರೆ. ವಕೀಲಿ ವೃತ್ತಿಗೂ ವಿದಾಯ ಹೇಳುತ್ತಾರೆ. ಸಾರ್ವಜನಿಕ ರಂಗದಲ್ಲಿ ಗುರುತಿಸಿಕೊಳ್ಳಬೇಕೆಂದು ರಾಜಕೀಯ ರಂಗಕ್ಕೆ ಪ್ರವೇಶ ಮಾಡುತ್ತಾರೆ.

**೨.೩ ರಾಜಕೀಯ ಜೀವನ:**

ಸಾಧಿಸಬೇಕೆಂಬ ಛಲವೊಂದಿದ್ದರೆ ಸಾಧಕನಾದವನಿಗೆ ಸಾವಿರಾರು ದಾರಿಗಳಿರುತ್ತವೆ. ಎಂಬುದಕ್ಕೆ ಎಂ. ಪಿ. ಪಾಟೀಲರು ಒಂದು ಸ್ಪಷ್ಟ ನಿದರ್ಶನ. ಅವರು ಕಡು ಬಡತನದಲ್ಲಿ ಶಿಕ್ಷಣ ಪೂರೈಸಿದ ಸಂಗತಿ ನಮಗೆಲ್ಲ ತಿಳಿದ ವಿಷಯವಾಗಿದೆ. ಅಂಥ ಪರಸ್ಥಿತಿ ಬೇರೆ ಯಾರಿಗೂ ಬರಬಾರದೆಂದು ಸಮಾಜ ಸೇವೆಗೆ ಮುಂದಾಗುತ್ತಾರೆ. ದೀನ ದಲಿತರಿಗೆ ಬಡಜನತೆಗೆ ನನ್ನಿಂದ ಏನು ಮಾಡಲು ಸಾಧ್ಯವಿದೆಯೋ ಅಂಥ ಉಪಕಾರಕ್ಕಾಗಿ ತಮ್ಮ ಜೀವನವನ್ನು ಮುಡುಪಾಗಿಡಲು ಸಿದ್ಧರಾಗುತ್ತಾರೆ. ಆ ನಿಟ್ಟಿನಲ್ಲಿ ಮಾನವೀಯ ನೆಲೆಯಲ್ಲಿ ಕಾರ್ಯತತ್ಪರರಾಗುತ್ತಾರೆ.

ಜನ ಸೇವೆಗೆ ಇರುವದೊಂದೇ ಮಾರ್ಗ, ಅದು ರಾಜಕೀಯ ಕ್ಷೇತ್ರ ಎಂಬುದನ್ನು ಮನಗಂಡು ರಾಜಕೀಯಕ್ಕೆ ಪ್ರವೇಶ ಮಾಡುತ್ತಾರೆ.

ಎಂ. ಪಿ. ಪಾಟೀಲರು ರಾಜಕೀಯ ಪ್ರವೇಶಿಸಲು ಹಲವಾರು ಕಾರಣಗಳು ಇವೆ, ಪ್ರೇರಣೆಗಳು ಇವೆ. ಅವರಿಗೆ ರಾಜಕೀಯ ಪದವು ಹೊಸದೇನಲ್ಲ. ಕೊಲ್ಲಾಪುರದಲ್ಲಿ ಶಿಕ್ಷಣ ಪಡೆಯುತ್ತಿರುವಾಗಲೇ ಮಹಾರಾಷ್ಟ್ರದ ಪ್ರಭಾವಿ ರಾಜಕೀಯ ನಾಯಕರ ಭಾಷಣದ ಲೇಖನಗಳನ್ನು ಸಂಗ್ರಹಿಸಿ ಓದುವ ರೂಢಿಯನ್ನು ಇಟ್ಟುಕೊಂಡಿರುತ್ತಾರೆ. ಅದರ ಫಲವಾಗಿ ಅವರ ರಾಜಕೀಯದ ಕನಸೆಂಬ ಬೇರುಗಳು ಕೊಲ್ಲಾಪುರದ ಕಾಲೇಜು ಶಿಕ್ಷಣದಲ್ಲಿಯೇ ಚಿಗುರೊಡೆದಿದ್ದವು. ಅದಕ್ಕೆ ಸ್ಫೂರ್ತಿಯೆಂಬಂತೆ ಉನ್ನತ ಶಿಕ್ಷಣಕ್ಕಾಗಿ ಪುಣೆಗೆ ಹೋದ ಸಂದರ್ಭದಲ್ಲಿ ಅಲ್ಲಿ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಒಂದು ದಂಡವೇ ನಿರ್ಮಾಣವಾಗಿತ್ತು. ಅದರ ನಾಯಕತ್ವವನ್ನು ಮಹಾರಾಷ್ಟ್ರದ ಪ್ರಭಾವಿ ನಾಯಕರಾದ ಲೋಕಮಾನ್ಯ ಬಾಲಗಂಗಾಧರ ತಿಲಕರು ವಹಿಸಿಕೊಂಡಿರುತ್ತಾರೆ. ಆ ಕಾಲದಲ್ಲಿ ಪುಣೆಯು ಸ್ವಾತಂತ್ರ್ಯ ಸಂಗ್ರಾಮದ ಮಧ್ಯಭಾರತದ ರಾಜಕೀಯ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿರುತ್ತದೆ. ಇಂಥ ವ್ಯಕ್ತಿಗಳನ್ನು ಕಾಣುವ ಅವಕಾಶ ಎಂ. ಪಿ. ಪಾಟೀಲರಿಗೆ ದೊರೆಯುತ್ತದೆ. ಅವರ ಮನಸ್ಸು 'ನಾನು ಕೂಡಾ ದೇಶದ ಸ್ವಾತಂತ್ರ್ಯಕ್ಕಾಗಿ ನನ್ನಿಂದ ಕೈಲಾದ ಸಹಾಯಮಾಡಬೇಕೆಂದು ತುಡಿಯುತ್ತದೆ'[೧೯]. ಈ ಸಂದರ್ಭದಲ್ಲಿ ಗಾಂಧೀಜಿಯವರ ದರ್ಶನವಾದದ್ದರಿಂದ ಸ್ವಾತಂತ್ರ್ಯದ ಹುಚ್ಚು ಮನಸ್ಸಿನಲ್ಲಿ ಇನ್ನೂ ಗಟ್ಟಿಗೊಳ್ಳುತ್ತದೆ. ಅದೇ ಗುಂಗಿನಲ್ಲಿ ಬೊಂಬಾಯಿಯಲ್ಲಿ ಎಲ್.ಎಲ್.ಬಿ. ಕೋರ್ಸ್‌ನ್ನು ಮುಗಿಸಿಕೊಂಡು ಹುಕ್ಕೇರಿಗೆ ಬಂದು ವಕೀಲಿ ವೃತ್ತಿಯನ್ನು ಕೈಗೊಳ್ಳುತ್ತಾರೆ. ವಿಶೇಷವೆಂದರೆ ಹುಕ್ಕೇರಿ ನ್ಯಾಯಾಲಯದಲ್ಲಿ ಪೂರ್ಣಪ್ರಮಾಣದಲ್ಲಿ ಬ್ರಾಹ್ಮಣರೇ ವಕೀಲರಾಗಿದ್ದರು. ಬ್ರಾಹ್ಮಣೇತರ ವಕೀಲರೆಂದು ಎಂ. ಪಿ. ಪಾಟೀಲರು ಕಾರ್ಯನಿರ್ವಹಿಸುತ್ತಿದ್ದರು. ಎಂ. ಎಸ್. ಪಾಟೀಲರ ಒತ್ತಾಸೆ ಮತ್ತು ಒಡೆದು ಹೋಗಿದ್ದ ಬ್ರಾಹ್ಮಣೇತರ ಸಂಘಟನೆಗಳು ಒಂದಾಗುವ ಮೂಲಕ, ಹಾಗೂ ಮಹಾನ ನಾಯಕರ ಪ್ರೇರಣೆ ಇವೆಲ್ಲುವುಗಳೊಂದಿಗೆ ಜನ ಸೇವೆಯನ್ನು ಮಾಡಲು ಇದೊಂದು ಉತ್ತಮ ಅವಕಾಶವೆಂದು ಅರಿತು ಲೋಕಲ್ ಬೋರ್ಡಿಂಗ ಚುನಾವಣೆಗೆ ಸ್ಪರ್ಧಿಸುತ್ತಾರೆ. ಈ ಚುನಾವಣೆಯಲ್ಲಿ ಹುರಿಯಾಳುಗಳು ತಮ್ಮಲ್ಲಿಯೇ ಒಪ್ಪಂದ ಮಾಡಿಕೊಂಡಿದ್ದರಿಂದ ಎಂ. ಪಿ. ಪಾಟೀಲರು ತಾಲೂಕಾ ಬೋರ್ಡಿಗೆ ನಾಮಿನೇಟಡ್ ಆಗುತ್ತಾರೆ. 'ಲೋಕಲ್ ಬೋರ್ಡಿಂಗ್ ಚುನಾವಣೆಯಲ್ಲಿ ಬಹುಮತ ಪಡೆದು ತಾಲೂಕಾ ಬೋರ್ಡಿಗೆ ಪ್ರೆಸಿಡೆಂಟ್[೨೦] ಎಂದು ಆಯ್ಕೆಯಾಗುತ್ತಾರೆ.

ರಾಜಕೀಯದಲ್ಲಿ ಗಟ್ಟಿಯಾದ ನೆಲೆಕಂಡುಕೊಳ್ಳಲು ವಕೀಲಿ ವೃತ್ತಿಯನ್ನು ಅರ್ಧಕ್ಕೆ ನಿಲ್ಲಿಸಿ ‘೧೯೩೦ ರಲ್ಲಿ ಜಿಲ್ಲೆಯ ಸತ್ಯಾಗ್ರಹ ಸಂಘಟನೆಯಲ್ಲಿ ಪಾಲ್ಗೊಂಡು[೨೧] ಚದುರಿಹೋಗಿದ್ದ ಎಲ್ಲ ಕಾಂಗ್ರೇಸಿನ ಕಾರ್ಯಕರ್ತರನ್ನು ಒಟ್ಟುಗೂಡಿಸಿ ಬ್ರಿಟೀಷರ ವಿರುದ್ದದ ಚಳುವಳಿಯ ಕಾರ್ಯತಂತ್ರ ರೂಪಿಸುತ್ತಾರೆ. ಇದೇ ಹೊತ್ತಿಗೆ ಕರ್ನಾಟಕ ಏಕೀಕರಣದ ಹೋರಾಟವು ತೀವ್ರಸ್ವರೂಪದ ಹಾದಿಯನ್ನು ಹಿಡಿದಿರುತ್ತದೆ. ಈ ಪರಿಷತ್ತು ಗಡಿಭಾಗದಲ್ಲಿ ತನ್ನ ಶಾಖೆಗಳನ್ನು ನಿರ್ಮಿಸಬೇಕೆಂದು ಹವಣಿಕೆಯಲ್ಲಿದ್ದಾಗ ಎಂ. ಪಿ. ಪಾಟೀಲರು ‘ಸನ್ ೧೯೨೬ ರಲ್ಲಿ ಹುಕ್ಕೇರಿಯಲ್ಲಿ ಏಕೀಕರಣ ಸಂಸ್ಥೆಯನ್ನು ಸ್ಥಾಪಿಸುತ್ತಾರೆ[೨೨]. ಮತ್ತು ತಾವೇ ಅದರ ಪ್ರಥಮ ಅಧ್ಯಕ್ಷರಾಗುತ್ತಾರೆ. ಅಧ್ಯಕ್ಷರಾಗಿ ಕೈಕಟ್ಟಿ ಸುಮ್ಮನೆ ಕುಳಿತುಕೊಳ್ಳದೇ ಗಡಿಭಾಗದಲ್ಲಿ ಕನ್ನಡ ಭಾಷೆಯನ್ನು ಬೆಳೆಸುವ ಪ್ರಯತ್ನ ಮಾಡುತ್ತಾರೆ. ಅದಕ್ಕೆ ಪೂರಕವೆಂಬಂತೆ ಪ್ರತಿ ಹಳ್ಳಿ ಹಳ್ಳಿಗೂ ಸಂಚರಿಸಿ ಅನೇಕ ಜನರನ್ನು ಸದಸ್ಯರೆಂದು ನೇಮಕ ಮಾಡಿಕೊಳ್ಳುತ್ತಾರೆ. ಈ ಎಲ್ಲ ಸಹ ಸದಸ್ಯರು ಮತ್ತು ಎಂ. ಪಿ. ಪಾಟೀಲರು ಕೂಡಿಕೊಂಡು ‘೧೯೩೧ ರಲ್ಲಿ ಹುಕ್ಕೇರಿಯಲ್ಲಿ ರಾಜ್ಯಮಟ್ಟದ ಏಕೀಕರಣದ ಬೃಹತ ಸಮಾವೇಶವನ್ನು ಆಯೋಜಿಸುತ್ತಾರೆ[೨೩]. ಈ ಸಮಾವೇಶವು ಯಶಸ್ವಿಯಾಗುವದರ ಜೊತೆಗೆ ರಾಜಕೀಯದಲ್ಲಿ ನೆಲೆ ಕಂಡುಕೊಳ್ಳುತ್ತಿರುವ ಎಂ. ಪಿ. ಪಾಟೀಲರಿಗೆ ಈ ಸಮಾವೇಶವು ಮುಖ್ಯ ವೇದಿಕೆಯಾಗಿ ಪರಿಣಮಿಸುತ್ತದೆ. ಇಂಥ ಕಾರ್ಯ ಕೈಗೊಳ್ಳುತ್ತಿರುವಾಗಲೇ ಸೆರೆಮನೆ ವಾಸವನ್ನು ಅನುಭವಿಸಬೇಕಾಗುತ್ತದೆ. ಇತ್ತ ಮನೆಯ ಆರ್ಥಿಕ ಪರಿಸ್ಥಿತಿ ಬಹಳ ಸಂಕಷ್ಟದಲ್ಲಿರುತ್ತದೆ. ಮಡದಿ ಲಕ್ಷ್ಮೀಬಾಯಿಯವರು ಇದಾವುದಕ್ಕೂ ಜಗ್ಗದೆ ಅತಿ ಸಹನಾಮೂರ್ತಿಯಾಗಿ ಸಂಸಾರವನ್ನು ನಡೆಸಿಕೊಂಡು ಪತಿಗೆ ಸಹಕರಿಸುತ್ತಾರೆ. ‘೧೯೩೨ ರಲ್ಲಿ ಸೆರೆಮನೆಯಿಂದ ಹೊರಬಂದ[೨೪] ಎಂ. ಪಿ. ಪಾಟೀಲರು ಹೆಂಡತಿ ಮಾಡಿದ ಅವರಿವರ ಸಾಲವನ್ನು ತೀರಿಸುವುದಕ್ಕಾಗಿ ಹಿರಿಯರಿಂದ ಬಳುವಳಿಯಾಗಿ ಬಂದಿದ್ದ ಜಮೀನು ಮತ್ತು ಒಕ್ಕಲುತನದ ಸಾಮಗ್ರಿಗಳನ್ನು ಮಾರುತ್ತಾರೆ. ಈ ಸಂಧರ್ಭದಲ್ಲಿ ಹುಕ್ಕೇರಿಯ ನ್ಯಾಯಾಲಯವು ಗೋಕಾಕ್ಕೆ ಸ್ಥಳಾಂತರಗೊಂಡಿದ್ದರಿಂದ ತಮ್ಮ ನ್ಯಾಯವಾದಿ ವೃತ್ತಿಯನ್ನು ಹಾಗೂ ರಾಜಕೀಯ ಚಟುವಟಿಕೆಗಳನ್ನು[೨೫] ಮುಂದುವರೆಸಿಕೊಂಡು ಹೋಗಲು ಜಿಲ್ಲಾ ಸ್ಥಳವಾದ ಬೆಳಗಾವಿಯೇ ಸೂಕ್ತವೆಂದು ತಿಳಿದು ತಮ್ಮ ಮನೆಯನ್ನು ಬೆಳಗಾವಿಗೆ ಸ್ಥಳಾಂತರಿಸುತ್ತಾರೆ.

ಎಂ. ಪಿ. ಪಾಟೀಲರಿಗೆ ಬೆಳಗಾವಿಯಲ್ಲಿ ತಮ್ಮ ವಕೀಲಿ ವೃತ್ತಿಯನ್ನು ಕೈಗೊಳ್ಳುವದರ ಜೊತೆಗೆ ಸ್ವಾತಂತ್ರ್ಯ ಚಳುವಳಿಯ ಕಡೆಗೆ ಅವರು ಹೆಚ್ಚು ಗಮನ ಕೊಡುತ್ತಾರೆ. ಇದೇ ಸಂದರ್ಭದಲ್ಲಿ ಕಾಂಗ್ರೇಸ ಪಕ್ಷವು ತನ್ನ ಹೋರಾಟವನ್ನು

ತೀವ್ರಗೊಳಿಸಿರುತ್ತದೆ. ಕಾರಣ ಬ್ರಿಟೀಷ ಭಾರತದ ಆಡಳಿತ ವ್ಯವಸ್ಥೆಯಲ್ಲಿ ಭಾರತೀಯರಿಗೂ ಅವಕಾಶ ಒದಗಿಸಿಕೊಡಬೇಕೆಂಬುವುದು. ಅದಕ್ಕೆ ಬ್ರಿಟೀಷ ಸರ್ಕಾರ ಪಾರ್ಲಿಮೆಂಟರಿಯಲ್ಲಿ ಹೊಸ ಅವಕಾಶವನ್ನು ಕಲ್ಪಿಸಿಕೊಡುತ್ತದೆ. ಅದರ ಅಂಗವಾಗಿ ಭಾರತೀಯರು ಕೂಡಾ ಬ್ರಿಟೀಷ ಆಡಳಿತದಲ್ಲಿ ಪಾಲ್ಗೊಳ್ಳಬಹುದು ಎಂದು ನಿರ್ಣಯ ಕೊಡುತ್ತದೆ. ಬ್ರಿಟೀಷ ಸರಕಾರವು ದೇಶವನ್ನು ಪ್ರಾಂತಗಳನ್ನಾಗಿ ವಿಭಜಿಸುವ ಮೂಲಕ ಜನಪ್ರತಿನಿಧಿಗಳ ಸಂಖ್ಯೆಯನ್ನು ನಿರ್ಧಿಷ್ಟಗೊಳಿಸುತ್ತದೆ. ಅದರಂತೆ ಬೆಳಗಾವಿ ಜಿಲ್ಲೆಯು ಬೊಂಬಾಯಿ ಪ್ರಾಂತದ ಅಧಿನಕ್ಕೊಳಪಡುತ್ತದೆ. ಕಾಂಗ್ರೇಸ ಪಕ್ಷವು ಈ ಚುನಾವಣೆಯಲ್ಲಿ ಅತ್ಯಂತ ಆಸಕ್ತಿಯಿಂದ ಭಾಗವಹಿಸುತ್ತದೆ. ಹಾಗೂ ಹಲವು ಪ್ರಣಾಳಿಕೆಗಳನ್ನು ಸಿದ್ಧಪಡಿಸಿ ಬಿಡುಗಡೆಗೊಳಿಸುತ್ತದೆ. ಈ ಚುನಾವಣೆಗೆ ಕಾಂಗ್ರೇಸ ಪಕ್ಷವು ಯೋಗ್ಯವಾದ ಅಭ್ಯರ್ಥಿಯ ಹುಡುಕಾಟದಲ್ಲಿ ತೊಡಗುತ್ತದೆ. ಆಗ ಎಂ. ಪಿ. ಪಾಟೀಲರ ಕಾರ್ಯವೈಖರಿ, ಕೆಚ್ಚೆದೆಯ ಹೋರಾಟದ ಮನೋಭಾವ, ಸ್ವಾತಂತ್ರ್ಯ ಪ್ರೇಮವನ್ನು ಗುರುತಿಸಿದ ಕಾಂಗ್ರೇಸ ಪಕ್ಷವು ಬೆಳಗಾವಿ ಕ್ಷೇತ್ರದ ಚುನಾವಣೆಗೆ ಅಧಿಕೃತ ಅಭ್ಯರ್ಥಿ ಎಂದು ಘೋಷಿಸಿ ಅವರನ್ನು ಚುನಾವಣೆಗೆ ನಿಲ್ಲಿಸುತ್ತದೆ. ಆದರೆ ಎಂ. ಪಿ. ಪಾಟೀಲರು ಇದನ್ನು ನಯವಾಗಿ ತಿರಸ್ಕರಿಸುತ್ತಾರೆ. ಅದಕ್ಕೆ ಬಲವಾದ ಕಾರಣವೂ ಇರುತ್ತದೆ.

ಬ್ರಿಟೀಷರಿಂದ ಶಿಕ್ಷೆಗೆ ಒಳಪಟ್ಟು ಜೈಲಿನಿಂದ ಬಿಡುಗಡೆಹೊಂದಿ ಮನೆಗೆ ಬಂದಾಗ ಅವರ ಆರ್ಥಿಕ ಪರಿಸ್ಥಿತಿ ಕೈಕೊಟ್ಟಿರುತ್ತದೆ. ಆದರೆ ವಿಧಿಯ ಆಸೆ ಗಾಂಧಿವಾದಿಗಳ ಶ್ರೀರಕ್ಷೆ, ಸ್ನೇಹಿತರಿಂದ ಸಂಗ್ರವಾದ ದೇಣಿಗೆ ಇವೆಲ್ಲಕ್ಕಿಂತ ಮುಖ್ಯವಾಗಿ ಜನರ ಆಶೀರ್ವಾದ. ಈ ಎಲ್ಲ ಬಲದಿಂದ ಚುನಾವಣೆಗೆ ಸ್ಪರ್ಧಿಸಲು ಸಿದ್ಧರಾಗುತ್ತಾರೆ. ಇವರ ಪ್ರತಿಸ್ಪರ್ಧಿಯಾಗಿ ಎಸ್. ಎನ್. ಅಂಗಡಿಯವರು ಕಣದಲ್ಲಿರುತ್ತಾರೆ. ಕಾಂಗ್ರೇಸ ಪಕ್ಷದಲ್ಲಿದ್ದ ಗುಂಪುಗಾರಿಕೆಯೆಲ್ಲ ಮಾಯವಾಗಿ ಎಲ್ಲರೂ ಒಟ್ಟುಗೂಡಿ ಎಂ. ಪಿ. ಪಾಟೀಲರ ಗೆಲುವಿಗೆ ಶ್ರಮಿಸುತ್ತಾರೆ.

ಎಂ. ಪಿ. ಪಾಟೀಲರ ತ್ಯಾಗಗುಣ, ಪರಿಶ್ರಮ, ಪ್ರಾಮಾಣಿಕ ಪ್ರಯತ್ನ ಇದೆಲ್ಲವನ್ನು ಮನಗಂಡ ಮತದಾರ ಅವರನ್ನು ಕೈ ಬಿಡುವದಿಲ್ಲ. ಈ ಚುನಾವಣೆಯಲ್ಲಿ ಎಂ. ಪಿ. ಪಾಟೀಲರು ಭಾರಿ ಬಹುಮತಗಳ ಅಂತರದಿಂದ ಗೆಲುವು ಪಡೆಯುದರ ಮೂಲಕ ತಮ್ಮ ಪ್ರತಿಸ್ಪರ್ಧಿ ಅಂಗಡಿಯವರನ್ನು ಸೋಲಿಸಿ ಬೊಂಬಾಯಿ ಪ್ರಾಂತದ ವಿಧಾನ ಸಭೆಗೆ ಆಯ್ಕೆಯಾಗುತ್ತಾರೆ.

"ಒಂದು ಕಾಲದಲ್ಲಿ ಬೊಂಬಾಯಿಗೆ ಕಾನೂನು ಪದವಿಯನ್ನು ಪಡೆಯಲು ಹೋದಂತಹ ಆ ಕಷ್ಟದ ನೆನಪುಗಳು ಒಂದು ಕಡೆಯಾದರೆ, ಈಗ ಅದೇ ಬೊಂಬಾಯಿಗೆ ಒಬ್ಬ ಜನಪ್ರತಿನಿಧಿಯಾಗಿ ಆಯ್ಕೆಯಾಗಿಹೋದ ಎಂ. ಪಿ.

ಪಾಟೀಲರ ಸಾಧನೆ ನಿಜಕ್ಕೂ ಅವಿಸ್ಮರಣೀಯವಾಗಿದೆ". ಈ ಚುನಾವಣೆಯಲ್ಲಿ ಬೊಂಬಾಯಿ ಪ್ರಾಂತದಲ್ಲಿ ಕಾಂಗ್ರೇಸ ಪಕ್ಷವು ಸಂಪೂರ್ಣ ಬಹುಮತ ಪಡೆಯುತ್ತದೆ. ರಾಜಕೀಯ ಮುತ್ಸದ್ದಿ ಸ್ವತಂತ್ರ ಹೋರಾಟಗಾರರಾದ 'ಬಿ. ಜಿ. ಖೇರ ಅವರನ್ನು ಮುಖ್ಯಮಂತ್ರಿಯೆಂದು ಸರ್ವಾನುಮತದಿಂದ ಆಯ್ಕೆಮಾಡುತ್ತಾರೆ. ಖೇರ ಹಾಗೂ ಮುರಾರ್ಜಿ ದೇಸಾಯಿಯವರು ಕೂಡಿಕೊಂಡು ಎಂ. ಪಿ. ಪಾಟೀಲರಿಗೆ ಕೃಷಿಯ ಬಗ್ಗೆ ಮತ್ತು ದುಡಿಯುವ ರೈತರ ಬಗ್ಗೆ ಅಪಾರ ಕಾಳಜಿ ಇರುವುದನ್ನು ಕಂಡು ೧೯೩೭ ರಲ್ಲಿ ಕೃಷಿ ಸಚಿವರ ಸಂಸದಿಯ ಕಾರ್ಯದರ್ಶಿಯೆಂದು'[೨೬] ತಮ್ಮ ಸಂಪುಟದಲ್ಲಿ ನೇಮಿಸಿಕೊಳ್ಳುತ್ತಾರೆ.

ಸಂಸದಿಯ ಕಾರ್ಯದರ್ಶಿಯೆಂದು ಅಧಿಕಾರವನ್ನು ವಹಿಸಿಕೊಂಡ ಎಂ. ಪಿ. ಪಾಟೀಲರು ಪ್ರಸ್ತುತ ಇರುವಂತಹ ಕೃಷಿ ಪದ್ಧತಿಗೆ ಕಾಯಕಲ್ಪ ತರುತ್ತಾರೆ. ಆ ನಿಟ್ಟಿನಲ್ಲಿ ರೈತರಿಗಾಗಿ ಹಲವಾರು ಯೋಜನೆಗಳನ್ನು ರೂಪಿಸುತ್ತಾರೆ. ಅವುಗಳಲ್ಲಿ ಮೊದಲನೆಯದು ರೈತರ ಜಮೀನುಗಳಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸುವುದು. ಜಮೀನುದಾರರು ಸಣ್ಣ ಹಿಡುವಳಿಗಾರರ ಮೇಲೆ ಮಾಡುತ್ತಿರುವ ದಬ್ಬಾಳಿಕೆಯನ್ನು ತಡೆಗಟ್ಟುವುದು. ಟೆನನ್ಸಿ ಕಾಯಿದೆಯನ್ನು ಜಾರಿಗೆ ತರುವುದು. ರೈತರು ನೆಮ್ಮದಿಯಿಂದ ಜೀವನ ಸಾಗಿಸಲು ಸರಕಾರದಿಂದ ಸಾಕಷ್ಟು ಅನುಕೂಲ ಮಾಡಿಕೊಡುತ್ತಾರೆ. ಬೆಳಗಾವಿ ಭಾಗದ ರೈತರ ಸಮಸ್ಯೆಗಳನ್ನು ಸದನದಲ್ಲಿ ಎತ್ತಿ ಪರಿಹಾರಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ. ಭೂಸುಧಾರಣೆಯನ್ನು ಜಾರಿಗೆ ತರುವಲ್ಲಿ ಇವರಿಗಿದ್ದ ಕಾಳಜಿಯನ್ನು ಕಂಡು ಮುಖ್ಯಮಂತ್ರಿ ಬಿ.ಜಿ. ಖೇರ, ಮುರಾರ್ಜಿ ದೇಸಾಯಿಯವರು ಇವರನ್ನು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ.

ಸಂಸದಿಯ ಕಾರ್ಯದರ್ಶಿಗಳಾಗಿ ಉತ್ತಮ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಸಮಯದಲ್ಲಿ ಎರಡನೇ ಮಹಾಯುದ್ಧವು ಪ್ರಾರಂಭವಾಗುತ್ತದೆ. ಬ್ರಿಟೀಷ ಸರಕಾರವು ಈ ಯುದ್ಧದಲ್ಲಿ ಭಾರತೀಯ ಸೈನ್ಯವನ್ನು ತೊಡಗಿಸಿಕೊಳ್ಳಬೇಕೆಂದು ನಿರ್ಣಯ ಕೊಡುತ್ತದೆ. ಇದನ್ನು ಕಾಂಗ್ರೇಸ ಸರಕಾರವು ತೀವ್ರವಾಗಿ ವಿರೋಧಿಸುತ್ತದೆ. ಇದರಿಂದಾಗಿ '೧೯೩೯ ರಲ್ಲಿ ಬಿ.ಜಿ. ಖೇರ ನೇತೃತ್ವದ ಸರಕಾರ ರಾಜಿನಾಮೆ ನೀಡುತ್ತದೆ'[೨೭]. ಆಗ ಎಂ. ಪಿ. ಪಾಟೀಲರು ಮರಳಿ ಬೆಳಗಾವಿಗೆ ಬರುತ್ತಾರೆ.

ಎಂ ಪಿ ಪಾಟೀಲರು ಬೆಳಗಾವಿ ವಿಭಾಗದಲ್ಲಿ ಕಾಂಗ್ರೇಸ ಪಕ್ಷವನ್ನು ಸಂಘಟಿಸಿ ಬ್ರಿಟೀಷರ ವಿರುದ್ಧ ಸತ್ಯಾಗ್ರಹ ಕೈಕೊಳ್ಳುತ್ತಾರೆ. ಬ್ರಿಟೀಷ ಸರಕಾರದ ಧೋರಣೆಗಳನ್ನು ಪ್ರತಿಭಟಿಸುತ್ತಾರೆ. ಇದರಿಂದ ಬ್ರಿಟೀಷರು ಇವರನ್ನು ಬೆಳಗಾವಿ ಭಾಗದ ರಾಜಕೀಯ ಕೈದಿ ಎಂದು ಬಂಧಿಸಿ ಜೈಲಿಗೆ ಕಳಿಸುತ್ತಾರೆ. ಕೆಲವು ದಿನಗಳ

ನಂತರ ಜೈಲಿನಿಂದ ಬಿಡುಗಡೆಯಾಗಿ ಬಂದ ಎಂ. ಪಿ. ಪಾಟೀಲರು ಕಾಂಗ್ರೇಸ ಪಕ್ಷದ ಪರ ಪ್ರಚಾರ ಕೈಗೊಂಡು ಕಾರ್ಯಕರ್ತರನ್ನು ಒಗ್ಗೂಡಿಸುತ್ತಾರೆ. ಜೊತೆಗೆ ಪಕ್ಷ ಸಂಘಟನೆಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಎಂ. ಪಿ. ಪಾಟೀಲರ ಕಾರ್ಯವೈಖರಿಯನ್ನು ಕಂಡ ಕಾಂಗ್ರೇಸ ಪಕ್ಷ ಇವರನ್ನು ಕರ್ನಾಟಕ ಪ್ರಾಂತೀಯ ಸಮಿತಿಗೆ ಅಧ್ಯಕ್ಷರನ್ನಾಗಿ ನೇಮಿಸುತ್ತಾರೆ. ಈ ಬೆಳವಣಿಗೆ ಎಂ. ಪಿ. ಪಾಟೀಲರಿಗೆ ರಾಷ್ಟ್ರಮಟ್ಟದ ನಾಯಕರ ಸ್ನೇಹವನ್ನು ಸಂಪಾದಿಸಿಕೊಳ್ಳುವಲ್ಲಿ ಸಹಾಯಕವಾಗುತ್ತದೆ. ಬಡವರಿಗೆ ತಮ್ಮ ಕೈಲಾದ ಸಹಾಯ, ಸಹಕಾರ ಮಾಡುತ್ತ ಜನಸೇವೆಗಾಗಿ ಹಗಲಿರುಳು ದುಡಿಯುತ್ತಾರೆ. ಈ ಸಮಯದಲ್ಲಿ ಎರಡನೇ ಪ್ರಾಂತೀಯ ಸಾರ್ವತ್ರಿಕ ಚುನಾವಣೆಗಳು ಪ್ರಾರಂಭವಾಗುತ್ತವೆ. ಎಂ. ಪಿ. ಪಾಟೀಲರು ಕಾಂಗ್ರೇಸ ಪಕ್ಷದ ಪರವಾಗಿ ಹಲವು ಸುತ್ತಿನ ಪ್ರಚಾರ ಕೈಕೊಳ್ಳುತ್ತಾರೆ. ಈ ಚುನಾವಣೆಯಲ್ಲಿ ಕಾಂಗ್ರೇಸ ಪಕ್ಷದ ಅಭ್ಯರ್ಥಿಗಳನ್ನು ಗೆಲ್ಲಿಸುವುದರ ಜೊತೆಗೆ ತಾವೂ ಕೂಡಾ ವಿಜಯಿ ಆಗುತ್ತಾರೆ.

ಈ ಚುನಾವಣೆಯಲ್ಲಿ ಕಾಂಗ್ರೇಸ ಪಕ್ಷವು ಹೆಚ್ಚು ಸ್ಥಾನವನ್ನು ಗಳಿಸಿ ಬಹುಮತ ಪಡೆದ ಪಕ್ಷವಾಗಿ ಹೊರಹೊಮ್ಮುತ್ತದೆ. ಮತ್ತೇ ಎರಡನೇ ಅವಧಿಗೆ ಬಿ.ಜಿ. ಖೇರ ಅವರನ್ನು ಮುಂಬಾಯಿ ಪ್ರಾಂತದ ಮುಖ್ಯಮಂತ್ರಿಯೆಂದು ಸರ್ವಾನುಮತದಿಂದ ಆಯ್ಕೆ ಮಾಡಲಾಗುತ್ತದೆ. ಇವರು ತಮ್ಮ ಸಚಿವ ಸಂಪುಟದಲ್ಲಿ ಕರ್ನಾಟಕದ ಗಡಿಭಾಗಕ್ಕೆ ಪ್ರಾತಿನಿಧ್ಯ ಕಲ್ಪಿಸಿಕೊಡಬೇಕೆಂಬ ನಿಟ್ಟಿನಲ್ಲಿ ಗಡಿಭಾಗದ ಪ್ರಭಾವಿ ನಾಯಕರಾದ ಎಂ. ಪಿ. ಪಾಟೀಲರನ್ನು ತಮ್ಮ ಸಂಪುಟಕ್ಕೆ ಸೇರಿಸಿಕೊಂಡು ಕೃಷಿ ಮತ್ತು ಅರಣ್ಯ ಖಾತೆಯನ್ನು ನೀಡುತ್ತಾರೆ.

ಸಂಶೋಧನಾತ್ಮಕ ಕೃಷಿ ಪದ್ಧತಿಯನ್ನು ಜಾರಿಗೆ ತಂದು ಈ ಭಾಗದ ಒಕ್ಕಲುತನ ಪದ್ಧತಿಯನ್ನು ಹೆಚ್ಚು ಸುಧಾರಿಸಬೇಕೆಂದು ವಿಚಾರ ಮಾಡುತ್ತಾರೆ. ಈ ದಿಸೆಯಲ್ಲಿ ತಜ್ಞರ ತಂಡವನ್ನು ನೇಮಿಸಿ ಅವರ ಸಲಹೆ ಮೇರೆಗೆ ಸಾಂಪ್ರದಾಯಿಕ ಒಕ್ಕಲುತನ ಪದ್ಧತಿಗೆ ನಾಂದಿ ಹಾಡುತ್ತಾರೆ. ರೈತರು ಮತ್ತು ಅವರ ಮಕ್ಕಳಿಗೆ ಆಧುನಿಕ ಶಿಕ್ಷಣವನ್ನು ಒದಗಿಸಬೇಕೆಂಬ ಉದ್ದೇಶದಿಂದ ಪುಣೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕೃಷಿ ಕಾಲೇಜಿನ ಮಾದರಿಯಲ್ಲಿಯೇ ತಮ್ಮ ಪ್ರಾಂತದ ಧಾರವಾಡದಲ್ಲಿ ಕೃಷಿ ಕಾಲೇಜನ್ನು ನಿರ್ಮಿಸಬೇಕೆಂಬ ಯೋಚನೆ ಮಾಡುತ್ತಾರೆ. ಅದರಂತೆ '೧೯೪೭ ರಲ್ಲಿ ಕೃಷಿ ಕಾಲೇಜನ್ನು ಸ್ಥಾಪಿಸಿ'[೨೮] ಕೃಷಿ ಕ್ಷೇತ್ರದಲ್ಲಿ ಅಮೂಲಾಗ್ರ ಬದಲಾವಣೆಯನ್ನು ತರುತ್ತಾರೆ. ಕೃಷಿ ಕ್ಷೇತ್ರಕ್ಕೆ ತಮ್ಮದೇ ಆದ ಒಂದು ಸ್ಪರ್ಶವನ್ನು ನೀಡಿ ತಾಂತ್ರಿಕ ಕೃಷಿ ಪದ್ಧತಿಗೆ ಅಡಿಪಾಯ ಹಾಕುತ್ತಾರೆ. ಹೀಗೆ ರೈತರನ್ನು ಆರ್ಥಿಕವಾಗಿ ಮೇಲೆತ್ತುವಲ್ಲಿ ಎಂ. ಪಿ. ಪಾಟೀಲರು ಮಾಡಿದ ಕಾರ್ಯಗಳು ಇಂದಿಗೂ ಅಚ್ಚಳಿಯದೇ ಉಳಿದುಕೊಂಡಿರುತ್ತವೆ.

ಒಕ್ಕಲುತನದ ಕಾರ್ಯಕ್ಕಾಗಿ ರೈತರಿಗೆ ರಿಯಾಯತಿ ದರದಲ್ಲಿ ಸರಕಾರದಿಂದ ಟ್ರ್ಯಾಕ್ಟರ್‌ಗಳನ್ನು ಒದಗಿಸುತ್ತಾರೆ. ಕೃಷಿ ಕ್ಷೇತ್ರದ ಸಂಶೋಧನೆಯಲ್ಲಿ ಆಸಕ್ತಿ ಇರುವ ಯುವಕರನ್ನು ಗುರುತಿಸಿ ಶಿಷ್ಯವೇತನಗಳನ್ನು ಕೊಡಿಸುತ್ತಾರೆ. ಕೃಷಿಯ ಬಗೆಗೆ ಉನ್ನತ ವ್ಯಾಸಂಗ ಕೈಕೊಳ್ಳುವ ಯುವಕರನ್ನು ವಿದೇಶಗಳಿಗೆ ಕಳಿಸುತ್ತಾರೆ. ರೈತರಿಗೆ ಕೃಷಿಯ ಬಗ್ಗೆ ಹೆಚ್ಚಿನ ಅರಿವನ್ನು ಮೂಡಿಸುವ ದೃಷ್ಟಿಯಿಂದ ಕೃಷಿ ಕಾಲೇಜಿನಲ್ಲಿ ಕೃಷಿಮೇಳವನ್ನು ಆಯೋಜಿಸುತ್ತಾರೆ. ಇತರೆ ದೇಶಗಳೊಂದಿಗೆ ಹೈನುಗಾರಿಕೆ ಒಪ್ಪಂದಗಳನ್ನು ಮಾಡಿಕೊಂಡು ಕುರಿಸಾಕಾಣಿಕೆ, ಉಣ್ಣೆ ವ್ಯಾಪಾರ, ಬೀಜ ನಿಗಮಗಳ ಸ್ಥಾಪನೆಯಂಥ ಹಲವಾರು ಕಾರ್ಯಕ್ರಮಗಳನ್ನು ಜಾರಿಗೆ ತರುತ್ತಾರೆ. ಇದರ ಜೊತೆಯಲ್ಲಿಯೇ ಅರಣ್ಯ ಕ್ಷೇತ್ರಕ್ಕೆ ಸಂಬಂಧಿಸಿದ ಬೇಟೆ ನಿಷೇಧ, ಅರಣ್ಯ ಒತ್ತುವರಿ ನಿಯಂತ್ರಣ, ಆದಿವಾಸಿಗಳಿಗೆ ಅರಣ್ಯದ ಕುರಿತು ತಿಳುವಳಿಕೆ ಕಾರ್ಯಕ್ರಮಗಳನ್ನು ಮೂಡಿಸುತ್ತಾರೆ. ಬಂಜರು ಭೂಮಿಯ ಸಾಗುವಳಿ ಮಾಡಿಸಿ ಹೆಚ್ಚು ಗಿಡಗಳನ್ನು ಬೆಳೆಸುವ ಯೋಜನೆಗಳನ್ನು ಹಾಕಿಕೊಳ್ಳುತ್ತಾರೆ.

ಅರಣ್ಯ ಸಂಪತ್ತಿನ ಸಂರಕ್ಷಣೆಗಾಗಿ ಪ್ರಪ್ರಥಮಬಾರಿಗೆ ವನಮಹೊತ್ಸವ ಕಾರ್ಯಕ್ರಮವನ್ನು ಜಾರಿಗೆ ತರುತ್ತಾರೆ. "ಪ್ರತಿವರ್ಷ ಜೂನ ೫ ರಂದು ಆಚರಿಸುವ ವನಮಹೋತ್ಸವ ಕಾರ್ಯಕ್ರಮದ ನಿಜವಾದ ಹರಿಕಾರರು ಎಂ. ಪಿ. ಪಾಟೀಲರೇ ಆಗಿದ್ದಾರೆ. ಈ ಕಾರ್ಯಕ್ರಮವನ್ನು ಇಡಿ ದೇಶದ ತುಂಬೆಲ್ಲ ಪ್ರಚಾರಗೊಳಿಸಿ ಕಾಂಗ್ರೆಸ ನಾಯಕರಿಂದ ಪ್ರಶಂಸೆಗೆ ಪಾತ್ರರಾಗಿದ್ದಾರೆ. ಜೊತೆಗೆ ಆಹಾರ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಿ ವಾಣಿಜ್ಯ ಬೆಳೆಗಳಿಗೆ ಕಾಯಕಲ್ಪ ತರುವ ನಿಟ್ಟಿನಲ್ಲಿ ಹಿಮಾಚಲ ಪ್ರದೇಶ, ಪಂಜಾಬ ರಾಜ್ಯಗಳಿಂದ ಆಲೂಗಡ್ಡೆ ಬೀಜಗಳನ್ನು ತರೆಸಿಕೊಂಡು ಇಲ್ಲಿಯ ರೈತರಿಗೆ ವಿತರಿಸಿದ್ದಾರೆ. ಈ ಭಾಗದಲ್ಲಿ ಅಂತಹ ವಿವಿಧ ವಾಣಿಜ್ಯ ಬೆಳೆಗಳನ್ನು ಪರಿಚಯಿಸುತ್ತಾರೆ. ಕೃಷಿಗೆ ಮುಖ್ಯವಾಗಿ ಬೇಕಾಗಿರುವುದು ನೀರಾವರಿ ವ್ಯವಸ್ಥೆಯೆಂಬುದನ್ನು ಮಣಗಾನುತ್ತಾರೆ. ಅದಕ್ಕಾಗಿ ದೊಡ್ಡ ದೊಡ್ಡ ಆನೆಕಟ್ಟುಗಳನ್ನು ಕಟ್ಟುವ ಯೋಜನೆ ಕೈಬಿಟ್ಟು ಸಣ್ಣ ನೀರಾವರಿ ಪದ್ಧತಿಗಳಾದ ಕೆರೆಕಟ್ಟೆ, ಬಾಂದಾರುಗಳನ್ನು ನಿರ್ಮಿಸಿ ಈ ಭಾಗದ ಕೃಷಿ ಭೂಮಿಗೆ ನೀರಾವರಿ ವ್ಯವಸ್ಥೆಯನ್ನು ಕಲ್ಪಿಸಿ ಕೊಟ್ಟಿದ್ದಾರೆ. ಕೊಟ್ಟ ಆಶ್ವಾಸನೆಗಳನ್ನು ಈಡೇರಿಸುವದರ ಮೂಲಕ ಪ್ರಮಾಣ ವಚನ ಸಂದರ್ಭದಲ್ಲಿ ಮಾಡಿದ ಪ್ರತಿಜ್ಞೆಯನ್ನು ಸಾರ್ಥಕಗೊಳಿಸಿ ತಮ್ಮ ಸೇವಾ ಅವಧಿಯನ್ನು ಪೂರ್ಣಗೊಳಿಸುತ್ತಾರೆ. ಬಿ.ಜಿ. ಖೇರ ಅವರ ಮಂತ್ರಿಮಂಡಳದ ಅಧಿಕಾರಾವಧಿ ಮುಗಿದು ಮತ್ತೇ ಚುನಾವಣೆಗಳು ಪ್ರಾರಂಭವಾಗುತ್ತವೆ. '೧೯೫೦ ರಲ್ಲಿ ನಡೆದ ಚುನಾವಣೆಯಲ್ಲಿ ಎಂ. ಪಿ. ಪಾಟೀಲರು ಸ್ಪರ್ಧಿಸಿ ಪುನರ ಆಯ್ಕೆಯಾಗುತ್ತಾರೆ'[೨೮]. ಈ ಚುನಾವಣೆಯಲ್ಲಿ ಕಾಂಗ್ರೇಸ ಪಕ್ಷ ಸ್ಪಷ್ಟ ಬಹುತ

ಪಡೆದಿದ್ದುದ್ದರಿಂದ ಮುರಾರ್ಜಿ ದೇಸಾಯಿಯವರು ಮುಖ್ಯಮಂತ್ರಿಯೆಂದು ಸರ್ವಾನುಮತದಿಂದ ಆಯ್ಕೆ ಆಗುತ್ತಾರೆ. ಈ ಸರಕಾರದಲ್ಲಿಯೂ ಎಂ. ಪಿ. ಪಾಟೀಲರು ಸಹಕಾರ ಸಚಿವರೆಂದು ನೇಮಕವಾಗುತ್ತಾರೆ.

ಸಹಕಾರಿ ಸಂಘಗಳಿಗೆ ಹೊಸ ಕಾಯ್ದೆಯನ್ನು ರೂಪಿಸಿ ಅವುಗಳನ್ನು ಜಾರಿಗೆ ತರುತ್ತಾರೆ. ಪಂಚಾಯತಿ ವ್ಯವಸ್ಥೆಗೆ ಹೊಸ ಕಾಯಕಲ್ಪ ತಂದು ಪಂಚಾಯತ ರಾಜ್ಯ ವ್ಯವಸ್ಥೆಯನ್ನು ಅಭಿವೃದ್ಧಿ ಪಡಿಸುತ್ತಾರೆ. ಇದರ ಮುಖ್ಯ ಉದ್ದೇಶ ಗ್ರಾಮಗಳು ಸ್ವಾವಲಂಬಿ ಜೀವನವನ್ನು ಕೈಕೊಂಡು ಅಭಿವೃದ್ಧಿಹೊಂದುವುದಾಗಿದೆ.

ಸಹಕಾರ ಕ್ಷೇತ್ರದ ಮಹತ್ವ ಕುರಿತು ಜನರಲ್ಲಿ ಜಾಗೃತಿ ಮೂಡಿಸಲು ಬೊಂಬಾಯಿ ಪ್ರಾಂತದ ತುಂಬೆಲ್ಲ ಪ್ರಚಾರ ಕೈಗೊಳ್ಳುತ್ತಾರೆ. ಅದರ ಫಲವಾಗಿ ಸಹಕಾರಿ ತತ್ವದ ಅಡಿಯಲ್ಲಿ 'ಮಹಾರಾಷ್ಟ್ರದ ಲೋನಿಯಲ್ಲಿ ಒಂದು ಸಕ್ಕರೆ ಕಾರಖಾನೆ ಕಾರ್ಯ ನಿರ್ವಹಿಸುತ್ತಿದ್ದು[೩೦] ಈ ಭಾಗದಲ್ಲಿಯ ಅಂತ ಸಕ್ಕರೆ ಕಾರಖಾನೆಯನ್ನು ನಿರ್ಮಿಸಬೇಕೆಂದು ವಿಚಾರ ಮಾಡುತ್ತಾರೆ. ಅದರಂತೆ ಜನರಿಗೆ ಮನದಟ್ಟು ಮಾಡಿ ಎಂ. ಕೆ. ಹುಬ್ಬಳ್ಳಿ ಹಾಗೂ ಸಂಕೇಶ್ವರದಲ್ಲಿ ಸಹಕಾರ ರಂಗದ ಅಡಿಯಲ್ಲಿ ಸಕ್ಕರೆ ಕಾರಖಾನೆಗಳನ್ನು ಸ್ಥಾಪಿಸುತ್ತಾರೆ. ಹುಕ್ಕೇರಿ ಹಾಗೂ ಸಂಕೇಶ್ವರದಲ್ಲಿ ಅರ್ಬನ ಬ್ಯಾಂಕ್, ಘೋಡಗೇರಿಯಲ್ಲಿ ಕಾಜಗಾರ ಸೋಸೈಟಿಯಂತಹ ಸಹಕಾರಿ ಸಂಸ್ಥೆಗಳನ್ನು ಹುಟ್ಟುಹಾಕುತ್ತಾರೆ. ಜನರ ಪ್ರೀತಿ ವಿಶ್ವಾಸಗಳಿಗೆ ಪಾತ್ರರಾಗಿ ಸಹಕಾರ ತತ್ವದ ನೀತಿ ನಿಯಮಗಳಿಗೆ ಬದ್ಧರಾಗಿ ಕಾರ್ಯನಿವಹಿಸಿರುತ್ತಾರೆ.

ಎಂ. ಪಿ. ಪಾಟೀಲರು ಮಾಡಿದ ಕಾರ್ಯಗಳಿಗೆ ಕೃತಜ್ಞತೆಯನ್ನು ಅರ್ಪಿಸುವ ದೃಷ್ಟಿಯಿಂದ 'ದಿನಾಂಕ: ೧೧.೦೪.೧೯೫೪ ರಂದು ಹುಕ್ಕೇರಿಯಲ್ಲಿ ಹಮ್ಮಿಕೊಂಡ ಸಹಕಾರಿ ಸುವರ್ಣ ಮಹೋತ್ಸವದ ಅಂಗವಾಗಿ "ಸಹಕಾರದರ್ಶನ" ಎಂಬ ಹೊತ್ತಿಗೆಯನ್ನು ಬಿಡುಗಡೆಗೊಳಿಸುತ್ತಾರೆ[೩೧]. ಅದರಲ್ಲಿ ಎಂ. ಪಿ. ಪಾಟೀಲರು ಮಾಡಿದ ಕಾರ್ಯಗಳನ್ನು ಮುಕ್ತ ಕಂಠದಿಂದ ಶ್ಲಾಘಿಸಿರುತ್ತಾರೆ. ಇದರಿಂದ ಸಮಾಜದ ಮೇಲಿರುವ ಎಂ. ಪಿ. ಪಾಟೀಲರ ಪ್ರೀತಿ, ಕಳಕಳಿಯ ಅರಿವು ನಮಗಾಗುತ್ತದೆ. ಹೀಗೆ ನಿಷ್ಠೆ ಪ್ರಾಮಾಣಿಕತೆಯಿಂದ ಕಾರ್ಯನಿರ್ವಹಿಸುತ್ತಾ ತಮಗೆ ಕೊಟ್ಟ ಕಾರ್ಯವನ್ನು ಸುವ್ಯವಸ್ಥಿತವಾಗಿ ನಿಭಾಯಿಸಿ ಅಧಿಕಾರದ ಅವಧಿಯನ್ನು ಪೂರ್ಣಗೊಳಿಸುತ್ತಾರೆ.

೧೯೪೭ರಲ್ಲಿ ಸ್ವಾತಂತ್ರ್ಯ ಬಂದ ನಂತರದಲ್ಲಿ ಪ್ರಾಂತವಾರು ರಾಜ್ಯ ವಿಂಗಡನೆಯ ಕೂಗು ಕೇಳಿಬರುತ್ತಿರುತ್ತದೆ. ಏಕೀಕರಣ ಚಳುವಳಿಯು ಬಹಳ ಬಿರುಸಿನಿಂದ ಸಾಗುತ್ತಿರುತ್ತದೆ. ಇದರಿಂದ ಕರ್ನಾಟಕ ಪ್ರದೇಶವು ಹೊರತಾಗಿರುವುದಿಲ್ಲ. ಎಂ. ಪಿ. ಪಾಟೀಲರು ಈ ಚಳುವಳಿಯಲ್ಲಿ ಅತ್ಯಂತ

ಆಸಕ್ತಿಯಿಂದ ಪಾಲ್ಗೊಂಡು ಕೇಂದ್ರ ಸರಕಾರದ ಕಣ್ಣು ತೆರೆಸುತ್ತಾರೆ. ಚಳುವಳಿಯ ತೀವ್ರ ಸ್ವರೂಪವನ್ನು ಅರಿತ ಕೇಂದ್ರ ಸರಕಾರ ಪ್ರಾಂತಗಳ ಆಧಾರದ ಮೇಲೆ ರಾಜ್ಯಗಳನ್ನು ವಿಭಜನೆ ಮಾಡುತ್ತದೆ. ಅದರ ಫಲವಾಗಿ ೧೯೫೬ ನವ್ಹೆಂಬರ ೦೧ ರಂದು ಮೈಸೂರು ಎಂಬ ಹೊಸ ರಾಜ್ಯವು ಅಸ್ತಿತ್ವಕ್ಕೆ ಬರುತ್ತದೆ.

ಹೊಸದಾಗಿ ಅಸ್ತಿತ್ವಕ್ಕೆ ಬಂದ ಮೈಸೂರು ರಾಜ್ಯದಲ್ಲಿ ಚುನಾವಣೆಗಳು ಘೋಷಣೆ ಆಗುತ್ತವೆ. ಇದರಲ್ಲಿ ಕಾಂಗ್ರೆಸ ಪಕ್ಷವು ಭಾಗವಹಿಸುತ್ತದೆ. ರಾಜಕೀಯ ಕ್ಷೇತ್ರದಲ್ಲಿ ಮುತ್ಸದ್ಧಿ ರಾಜಕಾರಣಿಯೆಂದು ಹೆಸರುವಾಸಿಯಾಗಿದ್ದ ಎಂ. ಪಿ. ಪಾಟೀಲರು ಈ ಚುನಾವಣೆಯಲ್ಲಿ ಭಾಗವಹಿಸಿ ಜಯಶಾಲಿಗಳಾಗುತ್ತಾರೆ. ಈ ಚುನಾವಣೆಯಲ್ಲಿ ಕಾಂಗ್ರೆಸ ಪಕ್ಷ ಬಹುಮತ ಪಡೆದಿದ್ದರಿಂದ ಎಸ್.ನಿಜಲಿಂಗಪ್ಪನವರು ಮುಖ್ಯಮಂತ್ರಿಯೆಂದು ಸರ್ವಾನುಮತದಿಂದ ಆಯ್ಕೆಯಾಗುತ್ತಾರೆ. ಬೊಂಬಾಯಿ ಪ್ರಾಂತದಲ್ಲಿ ಸಚಿವರಾಗಿ ಕಾರ್ಯನಿರ್ವಹಿಸಿದ ಎಂ. ಪಿ. ಪಾಟೀಲರ ಕಾರ್ಯದಕ್ಷತೆಯನ್ನು ಕಂಡ ಎಸ್.ನಿಜಲಿಂಗಪ್ಪನವರು ಇವರನ್ನು ತಮ್ಮ ಸಚಿವ ಸಂಪುಟಕ್ಕೆ ಸೇರಿಸಿಕೊಂಡು ಕಂದಾಯ ಖಾತೆಯನ್ನು ನೀಡುತ್ತಾರೆ. ಅಧಿಕಾರವನ್ನು ವಹಿಸಿಕೊಂಡ ಎಂ. ಪಿ. ಪಾಟೀಲರು ಕಂದಾಯ ಇಲಾಖೆಯಲ್ಲಿ ಹಲವು ಮಾರ್ಪಾಡುಗಳನ್ನು ತರುತ್ತಾರೆ. ಜಮೀನ್ದಾರರು ಸಣ್ಣ ಹಿಡುವಳಿದಾರರ ಭೂಮಿಯನ್ನು ಕಬಳಿಸುವುದನ್ನು ತಡೆಗಟ್ಟಲು ಹಲವು ಕಾನೂನುಗಳನ್ನು ರೂಪಿಸಿ ಜಾರಿಗೆ ತರುತ್ತಾರೆ. ಹಿಂದಿನಿಂದ ನಡೆದುಬಂದಿರುವ ವಂಶಪಾರಂಪರ್ಯ ಅಧಿಕಾರವನ್ನು ಕೊನೆಗೊಳಿಸಿ ಪ್ರಜಾಪ್ರಭುತ್ವದ ತಳಹದಿಯಮೇಲೆ ಕಾರ್ಯನಿರ್ವಹಿಸಲು ಜನರಿಗೆ ಕರೆಕೊಡುತ್ತಾರೆ. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗಿಯಾದ ಹೋರಾಟಗಾರರಿಗೆ ಸರಕಾರದಿಂದ ಗೌರವಧನ ಕೊಡಿಸುವ ಕಾರ್ಯ ಮಾಡಿದ್ದಾರೆ.

ಎರಡು ದಶಕಗಳ ಕಾಲದ ತಮ್ಮ ರಾಜಕೀಯ ಜೀವನದಲ್ಲಿ ಜನಸಾಮಾನ್ಯರ, ರೈತರ ಜೀವನ ಪದ್ಧತಿಯಲ್ಲಿ ಬದಲಾವಣೆಯನ್ನು ತಂದು ಅಧಿಕಾರ ಇರಲಿ ಇರದೇ ಇರಲಿ ಅದಾವುದನ್ನು ಲೆಕ್ಕಕ್ಕೆ ತೆಗೆದುಕೊಳ್ಳದೆ ಹೋರಾಟ ನಡೆಸಿದ್ದಾರೆ. ರಾಜಕೀಯ ಜೀವನದಲ್ಲಿ ಹಲವು ಎಡರು-ತೊಡರುಗಳನ್ನು ಕಂಡರೂ ಅವುಗಳನ್ನು ಸಮಾಧಾನಚಿತ್ತದಿಂದ ಎದುರಿಸಿರುತ್ತಾರೆ. ಜನತೆ ತಮಗೆ ನೀಡಿದ ಅಧಿಕಾರವನ್ನು ಅತಿ ಪ್ರಾಮಾಣಿಕತೆಯಿಂದ ಸದ್ವಿನಿಯೋಗ ಮಾಡಿಕೊಂಡು ನಿಸ್ವಾರ್ಥ ಸೇವೆ ಸಲ್ಲಿಸಿ ಜನರ ನಾಡಿ ಮಿಡಿತಗಳಲ್ಲಿ ಚಿರಸ್ಥಾಯಿಯಾಗಿದ್ದಾರೆ.

**೨.೪ ಸಮಾಜ ಸೇವೆ ಮತ್ತು ಸ್ವಾತಂತ್ರ್ಯ ಚಳುವಳಿ:**

ಎಂ. ಪಿ. ಪಾಟೀಲರು ತಮ್ಮ ಶಿಕ್ಷಣವನ್ನು ಪೂರೈಸಿ ಹುಕ್ಕೇರಿಯಲ್ಲಿ ವಕೀಲಿ ವೃತ್ತಿಯನ್ನು ಪ್ರಾರಂಭಿಸುತ್ತಾರೆ. ಜೊತೆಗೆ ಸಮಾಜ ಸೇವೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ದಲಿತರನ್ನು, ಹಿಂದುಳಿದವರನ್ನು ಸಮಾಜದ ಮುಖ್ಯವಾಹಿನಿಗೆ ತರುವ ಉದ್ದೇಶದಿಂದ ಕೆಲವೊಂದು ಮಹತ್ವದ ಕಾರ್ಯಕ್ರಮಗಳನ್ನು ಕೈಕೊಳ್ಳುತ್ತಾರೆ. ಮಡಿ–ಮೈಲಿಗೆ ಆಚಾರ ಸಂಪ್ರದಾಯಗಳು ದಟ್ಟವಾಗಿದ್ದ ಆ ಕಾಲದಲ್ಲಿ ಮೇಲು–ಕೀಳು ಎಂಬ ಅಸ್ಪ್ರಶ್ಯತೆಯ ರೋಗವನ್ನು ಹೋಗಲಾಡಿಸಲು ದುಡಿಯುತ್ತಾರೆ. ಹಲವು ಸಮಾಜ ಸುಧಾರಕರಿಂದ ಪ್ರೇರಣೆಹೊಂದಿ ಹಿಂದುಳಿದ ವರ್ಗವನ್ನು ಮೇಲೆತ್ತುವ ಕಾರ್ಯವನ್ನು ಮಾಡಿದ್ದಾರೆ. ಅದಕ್ಕೆ ಪೂರಕವೆಂಬಂತೆ ಹುಕ್ಕೇರಿಯಲ್ಲಿ ಎಂ. ಎಸ್. ಪಾಟೀಲರು ಹರಿಜನ ಕೂಲಿಕಾರರ ಸಂಘವನ್ನು ಸ್ಥಾಪಿಸಿರುತ್ತಾರೆ ಅದಕ್ಕೆ ಎಂ. ಪಿ. ಪಾಟೀಲರು ಮಾರ್ಗದರ್ಶಕರಾಗಿ ಲೋಕಲ್ ಬೋರ್ಡಿಂಗ್‌ನ ಕಾಮಗಾರಿಗಳನ್ನು ಹರಿಜನ ಕೂಲಿಕಾರರ ಸಂಘಕ್ಕೆ ನೀಡಿ ಆ ಸಂಘವನ್ನು ಪುನಶ್ಚೇತನಗೊಳಿಸುತ್ತಾರೆ. ದಲಿತರಿಗೆ ಶಿಕ್ಷಣದ ಅರಿವನ್ನು ಮೂಡಿಸಿ ಅವರು ಸ್ವಾವಲಂಬಿ ಜೀವನವನ್ನು ನಡೆಸಲು ಸರಕಾರ ಹಾಗೂ ಸೊಸೈಟಿಗಳ ಮೂಲಕ ಬಡ್ಡಿ ರಹಿತ ಸಾಲವನ್ನು ಒದಗಿಸುತ್ತಾರೆ. ಗುಡಿಸಲಿನಲ್ಲಿ ವಾಸಿಸುತ್ತಿದ್ದ ಜೀವನ ಶೈಲಿಯಿಂದ ದಲಿತರನ್ನು ಮುಕ್ತಗೊಳಿಸಿ ಸ್ವಂತ ಮನೆಗಳನ್ನು ನಿರ್ಮಿಸಿಕೊಳ್ಳುವುದಕ್ಕೆ ಸಹಕಾರಿ ಸಂಘಗಳ ಮೂಲಕ ಆರ್ಥಿಕ ಸಹಾಯವನ್ನು ಒದಗಿಸಿಕೊಟ್ಟಿದ್ದಾರೆ.

ಎಂ. ಪಿ. ಪಾಟೀಲರು ಸಮಾಜದಲ್ಲಿ ಐಕ್ಯತೆಯನ್ನು ತರುವ ದೃಷ್ಟಿಯಿಂದ ಹಿಂದುಳಿದ ವರ್ಗದ ಯುವಕರ ಪಡೆಯೊಂದನ್ನು ರಚಿಸಿ ಅದಕ್ಕೆ ತಾವೇ ಅಧ್ಯಕ್ಷರಾಗುತ್ತಾರೆ. ಇದರಡಿಯಲ್ಲಿ ಹಲವು ಕಾರ್ಯಕ್ರಮಗಳನ್ನು ಹಾಕಿಕೊಳ್ಳುತ್ತಾರೆ. ಅವರು ಲೋಕಲ್ ಬೋರ್ಡಿನ ಅಧ್ಯಕ್ಷರಾಗಿದ್ದಾಗ ಮಾಡಿದ ಒಂದು ಕಾರ್ಯ. 'ಹುಕ್ಕೇರಿ ಕಾರಂಜಿಯ ನೀರನ್ನು ಕೇವಲ ಮೇಲ್ವರ್ಗದವರು ಮಾತ್ರ ಬಳಸುತ್ತಿದ್ದರು. ಈ ನೀರನ್ನು ದಲಿತವರ್ಗದವರು ಬಳಕೆಮಾಡಿಕೊಳ್ಳಬಹುದೆಂದು ಆದೇಶಹೊರಡಿಸುತ್ತಾರೆ'[೩೨]. ಇದರಿಂದ ಮೇಲ್ವರ್ಗದವರ ಕೋಪಕ್ಕೆ ತುತ್ತಾಗುತ್ತಾರೆ. ಆದರೂ ಸಹ ಅದಾವುದನ್ನು ಯೋಚಿಸದೇ ದಲಿತರಿಗೆ ಕಾರಂಜಿಯ ನೀರನ್ನು ತುಂಬಿಸುವ ಮೂಲಕ ಈ ಹೋರಾಟದಲ್ಲಿ ಯಶಸ್ವಿಯಾಗುತ್ತಾರೆ. ನಂತರದಲ್ಲಿ ದಲಿತರಿಗೆ ಪ್ರತ್ಯೇಕ ಭಾವಿಗಳನ್ನು ತೋಡಿಸಿಕೊಡುತ್ತಾರೆ.

ಸಹಕಾರ ಸಚಿವರಾಗಿದ್ದ ಸಂದರ್ಭದಲ್ಲಿ ಎಂ. ಪಿ. ಪಾಟೀಲರು ಹುಕ್ಕೇರಿ ಹಾಗೂ ಸಂಕೇಶ್ವರದಲ್ಲಿ ಲಿಬರಲ್ ಸೊಸೈಟಿಗಳನ್ನು ಸ್ಥಾಪಿಸಿರುತ್ತಾರೆ. ಈ ಭಾಗದ

ಜನರ ಶ್ರೇಯೋಭಿವೃದ್ಧಿಗಾಗಿ ಸಮಾಜ ಸೇವೆಯ ಮೂಲಕ ತಮ್ಮಿಂದಾದ ಕಾರ್ಯಗಳನ್ನು ಮಾಡಿರುತ್ತಾರೆ. "ಜನರ ಸೇವೆ ದೇವರ ಸೇವೆ"ಯೆಂಬ ನಂಬಿಕೆಯ ತಳಹದಿಯ ಮೇಲೆ ದುಡಿದಿರುತ್ತಾರೆ.

**ಸ್ವಾತಂತ್ರ್ಯ ಚಳುವಳಿ:**

ಎಂ. ಪಿ. ಪಾಟೀಲರು ವೃತ್ತಿಯ ಜೊತೆಗೆ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಕೊಂಡು ಹಲವು ಜನಪ್ರಿಯ ಕಾರ್ಯಗಳನ್ನು ಕೈಗೊಂಡಿದ್ದಾರೆ. ಅದರಲ್ಲಿ ದೇಶದ ಸ್ವಾತಂತ್ರ್ಯ ಹೋರಾಟವು ಪ್ರಮುಖವಾಗಿದೆ. ದೇಶವು ಪರಕೀಯರ ಕೈಯೊಳಗೆ ಸಿಕ್ಕು ನಲಗುತ್ತಿರುವುದನ್ನು ಕಂಡು ಸ್ವಾತಂತ್ರ್ಯ ಚುಳವಳಿಯಲ್ಲಿ ಧುಮುಕುವ ನಿರ್ಧಾರ ಮಾಡುತ್ತಾರೆ. ಈ ಭಾಗದ ಸ್ವಾತಂತ್ರ್ಯ ಹೋರಾಟಗಾರರನ್ನು ಒಗ್ಗೂಡಿಸಿ ಸತ್ಯಾಗ್ರಹ ಕೈಕೊಂಡು ಬ್ರಿಟೀಷರ ವಿರುದ್ಧ ಹೋರಾಡುತ್ತಾರೆ. ೧೯೩೦ ರಲ್ಲಿ ಬ್ರಿಟೀಷರ ವಿರುದ್ಧ ಜನರು ಬಂಡೆಳುವಂತೆ ಮಾಡುತ್ತಾರೆ[೨೨]. ಬ್ರಿಟೀಷ ಸರಕಾರ ಈ ಚಳುವಳಿಯನ್ನು ನಿಗ್ರಹಿಸಲು ಮುಂದಾಗುತ್ತದೆ. ಇದರಿಂದ ಹಲವು ನಾಯಕರು ಭೂಗತರಾಗುತ್ತಾರೆ. ಎಂ. ಪಿ. ಪಾಟೀಲರು ಮಾತ್ರ ಹೆಚ್ಚು ಹೆಚ್ಚು ಜನರನ್ನು ಸಂಪರ್ಕಿಸಿ ಚಳುವಳಿಯನ್ನು ತೀವ್ರಗೊಳಿಸುತ್ತಾರೆ. ಪರಿಣಾಮವಾಗಿ ಬ್ರಿಟೀಷರು ಇವರನ್ನು ಬಂಧಿಸಿ ಬೆಳಗಾವಿಯ ಹಿಂಡಲಗಾ ಜೇಲಿಗೆ ಕಳಿಸುತ್ತಾರೆ. ತರವಾಯ ಬಿಡುಗಡೆಹೊಂದಿದ ಎಂ. ಪಿ. ಪಾಟೀಲರು ಬ್ರಿಟೀಷ ಸರಕಾರದ ಸಾಮ್ರಾಜ್ಯಶಾಹಿ ಧೋರಣೆಯನ್ನು ವಿರೊಧಿಸುತ್ತಾರೆ. ಬ್ರಿಟೀಷರ ದಾಸ್ಯದಿಂದ ದೇಶವನ್ನು ಹಾಗೂ ಭಾರತೀಯರನ್ನು ಮುಕ್ತಗೊಳಿಸುವ ಸಲುವಾಗಿ ವಿವಿಧ ತೆರನಾದ ತಂತ್ರಗಳನ್ನು ರೂಪಿಸಿ ಬ್ರಿಟೀಷರಿಗೆ ಸಿಂಹಸ್ವಪ್ನವಾಗಿ ಕಾಡುತ್ತಾರೆ.

ಸಾತಂತ್ರ್ಯದ ಹೋರಾಟಕ್ಕೆ ಗಾಂಧೀಜಿಯವರಿಂದ ಪ್ರೇರಣೆ ಪಡೆದು ಕಾರ್ಯಕ್ರತರ ಸಂಘಟನೆಯನ್ನು ಕಟ್ಟಿಬೆಳೆಸುತ್ತಾರೆ. ಆ ಎಲ್ಲ ಕಾರ್ಯಕರ್ತರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸಜ್ಜುಗೊಳಿಸುತ್ತಾರೆ. ಹುಕ್ಕೇರಿ, ಬೆಳಗಾವಿ, ಗೋಕಾಕ, ನಿಪ್ಪಾಣಿಯಂತಹ ಊರುಗಳಲ್ಲಿ ಇಂತಹ ಸಂಘಟನೆಗಳನ್ನು ಕಟ್ಟಿ ಬ್ರಿಟೀಷರ ವಿರುದ್ಧ ಹೋರಾಡುತ್ತಾರೆ. ಘೋಷಣೆಗಳನ್ನು ಕೂಗುತ್ತ ಸ್ವಾತಂತ್ರ್ಯ ಚಳುವಳಿಯ ಮಹತ್ವವನ್ನು ಜನಸಾಮಾನ್ಯರಲ್ಲಿ ಮೂಡಿಸುವಲ್ಲಿ ಯಶಸ್ವಿಯಾಗುತ್ತಾರೆ. ಬ್ರಿಟೀಷರಿಂದ ಬಂಧನಕ್ಕೆ ಒಳಗಾಗಿ ಜೈಲುವಾಸ ಅನುಭವಿಸುತ್ತಾರೆ. ಈ ಸಂಧರ್ಭದಲ್ಲಿ ರಂ.ರಾ. ದಿವಾಕರ, ಗಾಂಧೀಜಿಯವರ ಆಪ್ತ ಸಹಾಯಕರಾದ ಮಹಾದೇವಭಾಯಿ ದೇಸಾಯಿ, ದಾವಲಸಾಹೇಬ ಪಟವರ್ಧನರಂತಹ ಪ್ರಮುಖ ವ್ಯಕ್ತಿಗಳ ಪರಿಚಯ ಎಂ. ಪಿ. ಪಾಟೀಲರಿಗೆ ಆಗುತ್ತದೆ. ಇವರ ಜೊತೆ ಕೂಡಿಕೊಂಡು ಭಾರತ ದೇಶದ ಸ್ವಾತಂತ್ರ್ಯದ

ಕುರಿತಾಗಿ ಹಲವು ವಿಚಾರಗಳನ್ನು ಚರ್ಚಿಸುತ್ತಾರೆ. ಬಿಡುವಿನ ವೇಳೆಯಲ್ಲಿ ನೂಲುವ ಕಾಯಕವನ್ನು ಮಾಡುತ್ತಾ ಸ್ವತಂತ್ರ ಭಾರತದ ಕನಸನ್ನು ಈಡೇರಿಸುವ ಕಾರ್ಯದಲ್ಲಿ ತಲ್ಲೀನರಾಗುತ್ತಾರೆ.

ಹೀಗೆ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿ ಈ ಭಾಗದ ಪ್ರಮುಖ ಸ್ವಾತಂತ್ರ್ಯ ಹೋರಾಟಗಾರರಾಗಿ ಕಾರ್ಯ ನಿರ್ವಹಿಸಿದ್ದಾರೆ. ಜನರ ಹಿಂಡನ್ನು ಕಟ್ಟಿಕೊಂಡು ಬ್ರಿಟೀಷರ ವಿರುದ್ಧ ಹೋರಾಡಿ ಭಾರತ ದೇಶಕ್ಕೆ ಸ್ವಾತಂತ್ರ್ಯ ತಂದು ಕೊಟ್ಟವರ ಸಾಲಿಗೆ ಎಂ. ಪಿ. ಪಾಟೀಲರು ಸೇರ್ಪಡೆಯಾಗಿದ್ದಾರೆ.

**೨.೫ ಸಾಹಿತ್ಯ ಮತ್ತು ಸಂಶೋಧನೆ:**

"ಆನೆ ನಡದದ್ದೇ ಮಾರ್ಗ" ಎಂಬ ಪಂಪಕವಿಯ ವಾಣಿಯಂತೆ ತಮಗೆ ಇಷ್ಟವಿದ್ದ ಕ್ಷೇತ್ರದಲೆಲ್ಲಾ ಒಂದು ಸುತ್ತು ಪ್ರಯಾಣ ಮಾಡಿರುತ್ತಾರೆ. ಎಂ. ಪಿ. ಪಾಟೀಲರು ಶೈಕ್ಷಣಿಕವಾಗಿ, ರಾಜಕೀಯವಾಗಿ, ಸಾಮಾಜಿಕವಾಗಿ ಮಾತ್ರ ಬೆಳೆಯದೇ ತಮ್ಮ ಜೀವಿತಾವಧಿಯ ದಿನಗಳನ್ನು ಸಾಹಿತ್ಯ ಕ್ಷೇತ್ರಕ್ಕೆ ಮೀಸಲಾಗಿಟ್ಟದ್ದಾರೆ. ಹಲವು ಚಿಂತನಪರ ಲೇಖನ, ಕೃತಿಗಳನ್ನು ರಚಿಸಿ ಈ ಭಾಗದ ಸಾಹಿತ್ಯ ಸರಸ್ವತಿಯ ಪುತ್ರರಾಗಿಯೂ ಕಾರ್ಯಮಾಡಿದ್ದಾರೆ. ಉತ್ಕೃಷ್ಟವಾದ ಬರಹ ಶೈಲಿಯಿಂದ ಒಳ್ಳೆಯ ವಿಚಾರವಾದಿಯಾಗಿ ಸಾಹಿತ್ಯದ ಸಾರಸ್ವತ ಲೋಕಕ್ಕೆ ತಮ್ಮದೇ ಆದ ಕಾಣಿಕೆಯನ್ನು ನೀಡಿದ್ದಾರೆ.

ಎಂ. ಪಿ. ಪಾಟೀಲರ ಸಾಹಿತ್ಯದ ಗೀಳು, ಇಂದು ನಿನ್ನೆಯದಲ್ಲ ಅವರು ಯಾವಾಗ ಶಾಲೆಯನ್ನು ಪ್ರವೇಶಿಸಿದರೋ ಅಂದಿನಿಂದ ಪ್ರಾರಂಭವಾಗಿತ್ತು. ಓದಿಗೆ ಮಾತ್ರ ಸೀಮಿತವಾಗಿದ್ದ ಸಾಹಿತ್ಯ ಬರಬರುತ್ತ ಸತ್ವಯುತವಾದ ವಿಚಾರಗಳ ಮೂಲಕ ಅಕ್ಷರದ ರೂಪವನ್ನು ಪಡೆದುಕೊಳ್ಳುತ್ತದೆ. ಜೀವನದ ಕೊನೆಯ ದಿನಗಳಲ್ಲಿ ಅದು ಸಂಶೋಧನೆಯತ್ತ ವಾಲಿ ಸಾಹಿತ್ಯ ಮತ್ತು ಸಂಶೋಧನಾ ಕ್ಷೇತ್ರದಲ್ಲಿ ಎಂ. ಪಿ. ಪಾಟೀಲರ ಹೆಸರನ್ನು ಅಜರಾಮರವಾಗಿ ಉಳಿಯುವಂತೆ ಮಾಡುತ್ತದೆ.

ಮರಾಠಿ ಭಾಷೆಯಲ್ಲಿ ಶಿಕ್ಷಣ ಕಲಿತರು ಕೂಡಾ ಕನ್ನಡ ಭಾಷೆಯ ಬಗ್ಗೆ ಇದ್ದ ಒಲವು ಮಾತ್ರ ದೂರವಾಗಿರಲಿಲ್ಲ. ರಾಜಕೀಯ, ಸಾಮಾಜಿಕ ಕಾರ್ಯಗಳ ಒತ್ತಡದ ಮದ್ಯೆಯೂ ಬರವಣಿಗೆಯನ್ನು ಮುಂದುವರಿಸಿಕೊಂಡು ಬಂದಿರುತ್ತಾರೆ. ಅವರ ಬರವಣಿಗೆಯನ್ನು ಈ ಕೆಳಗಿನಂತೆ ವಿಭಾಗಿಸಲಾಗಿದೆ.

೧) ವಿದ್ಯಾರ್ಥಿ ದೆಸೆಯಲ್ಲಿನ ಬರಹಗಳು

೨) ಕನ್ನಡ ಮತ್ತು ಮರಾಠಿ ಪತ್ರಿಕಾ ಲೇಖನಗಳು

೩) ಆತ್ಮ ಚರಿತ್ರೆ

೪) ಸೃಜನ ಶೀಲ ಸಾಹಿತ್ಯ

೫) ಸಂಶೋಧನಾ ಕೃತಿಗಳು

ಈ ವಿಭಾಗ ಕ್ರಮವನ್ನು ಡಾ. ಗುರುಪಾದ ಎಸ್. ಮರಿಗುದ್ದಿಯವರು ಸಂಪಾದಿಸಿದ ಎಂ. ಪಿ. ಪಾಟೀಲರ ಲೇಖನಗಳು ಮತ್ತು ಆತ್ಮಚರಿತ್ರೆ ಎಂಬ ಸಂಪಾದನಾ ಕೃತಿಯಿಂದ ಆಯ್ದುಕೊಳ್ಳಲಾಗಿದೆ.

ಶಿಕ್ಷಣ ಪಡೆಯಲೆಂದು ಕೊಲ್ಲಾಪುರಕ್ಕೆ ಹೋದ ಎಂ. ಪಿ. ಪಾಟೀಲರು ಮರಾಠಿ ಭಾಷೆಯನ್ನು ಕಲಿಯಲೇ ಬೇಕಾದ ಅನಿವಾರ್ಯತೆ ಬಂದೊದಗುತ್ತದೆ. ಇದರಿಂದ ಮರಾಠಿ ಭಾಷೆಯನ್ನು ಅಭ್ಯಸಿಸಲು ಆರಂಭಿಸುತ್ತಾರೆ. ಹಲವು ಮರಾಠಿ ಭಾಷೆಯ ಕಥೆ ಕಾದಂಭರಿಗಳ ಪರಿಚಯ ಇವರಿಗಾಗುತ್ತದೆ. ಅದರಲ್ಲಿ ಪ್ರಮುಖವಾದುದ್ದು "ಅರೇಬಿಯನ್ ನೈಟ್ಸ್". ಈ ಕಥೆಯಿಂದ ಪ್ರಭಾಪಿತರಾದ ಎಂ. ಪಿ. ಪಾಟೀಲರು ಹೆಚ್ಚು ಹೆಚ್ಚು ಮರಾಠಿ ಕೃತಿಗಳನ್ನು ಓದಿ ಮರಾಠಿ ಭಾಷೆಯನ್ನು ಸಂಪೂರ್ಣವಾಗಿ ಕಲಿಯುತ್ತಾರೆ. ಪರಿಣಾಮವಾಗಿ ರಾಜಾರಾಮ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಮರಾಠಿ ಭಾಷೆಯಲ್ಲಿ ಕವಿತೆ ಹಾಗೂ ಲೆಖನಗಳನ್ನು ಬರೆಯಲು ಪ್ರಾರಂಭಿಸುತ್ತಾರೆ.

ಹರಿನಾರಾಯಣ ಆಪ್ಟೆ ಎನ್ನುವಂಥಹ ಪ್ರಸಿದ್ಧ ಮರಾಠಿ ಸಾಹಿತಿಯ ಕಾದಂಬರಿಗಳನ್ನು ಓದಿಕೊಳ್ಳುತ್ತಾರೆ. ಸಾಹಿತ್ಯದಲ್ಲಿ ಇನ್ನೂ ಎತ್ತರಕ್ಕೆ ಬೆಳೆಯಬೇಕೆಂಬ ಹಂಬಲದಿಂದ ಪರಿಣಾಮಕಾರಿಯಾದ ಬರವಣಿಗೆಯಲ್ಲಿ ತೊಡಗಿಕೊಳ್ಳುತ್ತಾರೆ. ರಾಜಕೀಯ ಹಾಗೂ ವರ್ತಮಾನಕ್ಕೆ ಸಂಬಂಧ ಪಟ್ಟಂತಹ ಪುಸ್ತಕಗಳನ್ನು, ಪತ್ರಿಕೆಗಳನ್ನು ಸಂಗ್ರಹಿಸ ತೊಡಗುತ್ತಾರೆ. ಅದರಲ್ಲಿ ಕೇಸರಿ ಹಾಗೂ ಮನೋರಂಜನ ಎಂಬ ಮರಾಠಿ ಪತ್ರಿಕೆಗಳು ಇವರ ಮೇಲೆ ಗಾಢವಾದ ಪರಿಣಾಮ ಬಿರುತ್ತದೆ. ಉನ್ನತ ವ್ಯಾಸಂಗಕ್ಕಾಗಿ ಪುಣೆ ಹಾಗೂ ಬೊಂಬಾಯಿ ನಗರಗಳಲ್ಲಿ ಓದುತ್ತಿದ್ದಾಗ ಬಿಡುವಿನ ವೇಳೆಯಲ್ಲಿ ಕೆಲವೊಂದು ಸಾಹಿತ್ಯಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ.

ರಾಜಕೀಯಕ್ಕೆ ಪ್ರವೇಶ ಪಡೆದು ಇವರು ಬೊಂಬಾಯಿ ಪ್ರಾಂತದ ಸಚಿವರಾಗಿದ್ದಾಗ ಸ್ನೇಹಿತರ ಜೊತೆಗೂಡಿ '೧೯೫೪ ರಲ್ಲಿ ಬೆಳಗಾವಿಯಲ್ಲಿ ಅಖಿಲ ಭಾರತ ವೀರಶೈವ ಸಂಘ ಸ್ಥಾಪಿಸುತ್ತಾರೆ'[೩೪]. ಅದರ ಮೂಲಕ ಸಾಹಿತ್ಯಿಕ ಚಟುವಟಿಕೆಗಳನ್ನು ಪ್ರಾರಂಭಿಸುತ್ತಾರೆ. ಜೊತೆಗೆ ಮರಾಠಿ ಭಾಷೆಯಲ್ಲಿ ವೀರಶೈವ

ಪತ್ರಿಕೆಯನ್ನು ಪ್ರಾರಂಭಿಸಿ, ಅದರ ಮೂಲಕ ಹಲವು ಮಹತ್ವದ ಲೇಖನಗಳನ್ನು ಪ್ರಕಟಿಸುತ್ತಾರೆ. ಕರ್ನಾಟಕದ ಶರಣ ಸಂಪ್ರದಾಯ ಮತ್ತು ಶರಣರ ಸಂದೇಶಗಳನ್ನು ಮರಾಠಿ ಭಾಷೆಯ ಜನರಿಗೆ ತಲುಪಿಸುವ ಕಾರ್ಯವನ್ನು ಈ ಪತ್ರಿಕೆಯ ಮೂಲಕ ಮಾಡುದ್ದಾರೆ. 'ಜ್ಞಾನ ಪ್ರಸಾದ ಎಂಬ ಮರಾಠಿ ಪತ್ರಿಕೆಯನ್ನು ಪ್ರಾರಂಭಿಸಿ ಸ್ವತ: ಎಂ. ಪಿ. ಪಾಟೀಲರು ಈ ಪತ್ರಿಕೆಯಲ್ಲಿ ಲೇಖನಗಳನ್ನು ಬರೆದು ಪ್ರಕಟಿಸುತ್ತಾರೆ[೩೫]. ಅವುಗಳಲ್ಲಿ ಪ್ರಮುಖವಾದ ಲೇಖನಗಳು ವೀರರಾಣಿ ಕಿತ್ತೂರು ಚೆನ್ನಮ್ಮ, ಶೈವಾಗಮಗಳು, ವೀರಶೈವ ಧರ್ಮ ವೈದಿಕವೇ-ಅವೈದಿಕವೇ, ಮುಂತಾದ ೫೦ ಕ್ಕೂ ಹೆಚ್ಚು ವಿಚಾರಪೂರಿತ ಲೇಖನಗಳನ್ನು ಬರೆದು ಪ್ರಕಟಸುತ್ತಾರೆ. ಮರಾಠಿ ಭಾಷೆಯಲ್ಲಿ ಶೈವ ಧರ್ಮಾಚಾ ಉಗಮ, ಲಿಂಗ-ವ-ನಂದಿ, ವೀರ ಮಾಹೇಶ್ವರ ಪಂತ, ಪ್ರಾಚೀನ ಚಂದ್ರೋಪಮಾ ಸಂಪ್ರದಾಯ ಎಂಬ ಮರಾಠಿ ಲೇಖನಗಳನ್ನು ಪ್ರಕಟಿಸಿ ಲಿಂಗದ ಮಹತ್ವನ್ನು ಅದರ ಪರಿಕಲ್ಪನೆಯನ್ನು ಸಿಂಧು ನಾಗರಿಕತೆಯೊಂದಿಗೆ ಸಮೀಕರಿಸಿ ತೌಲನಿಕವಾಗಿ ವಿಶ್ಲೇಷಿಸುತ್ತಾರೆ.

ಮರಾಠಿ ಭಾಷೆಯಲ್ಲಿ ಬರವಣಿಗೆಯನ್ನು ಪ್ರಾರಂಭಿಸಿದ ಎಂ. ಪಿ. ಪಾಟೀಲರು ಕನ್ನಡದಲ್ಲಿಯೂ ಬರೆಯಬೇಕೆಂದು ವಿಚಾರ ಮಾಡುತ್ತಾರೆ. ಅದರ ಫಲವಾಗಿ ಹಲವಾರು ಲೇಖನಗಳನ್ನು ಬರೆಯಲು ಪ್ರಾರಂಭಿಸುತ್ತಾರೆ. ಅವುಗಳೆಂದರೆ ಪತ್ರಿಕೆಯ ಧ್ಯೆಯಧೋರಣೆಗಳು, ಸಮಾಜವಾದಿ ಸಮಾಜ ಸ್ಥಾಪನೆಯ ಆದ್ಯಜನಕ, ಶ್ರೀ ಗುರುದೇವ ರಾನಡೆ, ಶಾಂತಲಿಂಗ ಶಿವಯೋಗಿಗಳು ಇತ್ಯಾದಿ ಪರಿಣಾಮಕಾರಿಯಾದ ಪ್ರಥಮದರ್ಜೆಯ ಲೇಖನಗಳನ್ನು ಬರೆದು ಪ್ರಕಟಿಸುತ್ತಾರೆ. ಬಸವಣ್ಣನವರ ಕುರಿತಾಗಿ "ಭಕ್ತಿ ಬಂಢಾರಿ ಬಸವಣ್ಣ" ಎಂಬ ನಾಟಕವನ್ನು ರಚನೆ ಮಾಡಿರುತ್ತಾರೆ. "ಬಸವಣ್ಣ ನನ್ನ ಮಗನಿಗೆ ಬುದ್ಧಿ ಕೊಡಪ್ಪ" ಎಂಬ ಕಥೆಯನ್ನು ಬರೆದಿದ್ದಾರೆ. ಅಲ್ಲದೇ ತಮ್ಮ ಜೀವನದ ಕುರಿತಾದ "ನನ್ನ ಜೀವನ ಚರಿತೆ" ಎಂಬ ಆತ್ಮ ಚರಿತ್ರೆಯನ್ನು ಬರೆದಿರುತ್ತಾರೆ. ಅದು ಅಪೂರ್ಣವಾಗಿದೆ.

ಎಂ. ಪಿ. ಪಾಟೀಲರು ಕೇವಲ ಸೃಜನ ಸಾಹಿತ್ಯವನ್ನು ಮಾತ್ರ ರಚನೆ ಮಾಡದೇ, ರಾಜಕೀಯ ನಿವೃತ್ತಿ ತೆಗೆದುಕೊಂಡ ನಂತರ ಜೀವಿತದ ಕೊನೆಯ ದಿನಗಳಲ್ಲಿ ಸಂಶೋಧನಾ ಕ್ಷೇತ್ರದತ್ತ ತಮ್ಮ ಮನಸ್ಸನ್ನು ಹರಿಬಿಟ್ಟಿರುತ್ತಾರೆ. ಆ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾಗುತ್ತಾರೆ. ಅನಾರೊಗ್ಯ ಕೈಕೊಡುತ್ತಿದ್ದರೂ ಸಕ್ಕರೆ ಕಾಯಿಲೆಯಿಂದ ಎರಡೂ ಕಾಲುಗಳನ್ನು ಕಳೆದುಕೊಂಡು ಹಾಸಿಗೆ ಹಿಡಿಯುತ್ತಾರೆ. ಸಂಶೋಧನೆಯ ಆಕರ್ಷಣೆಯಿಂದಾಗಿ ಸ್ನೇಹಿತರ ಮತ್ತು ಸಂಬಂಧಿಕರ ಮೂಲಕ ಸಂಬಂಧ ಪಟ್ಟ ಪುಸ್ತಕಗಳನ್ನು ತರಿಸಿಕೊಂಡು ಈ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಎಂ. ಪಿ. ಪಾಟೀಲರ ಸಂಶೋಧನಾ ಕೃತಿಗಳು ಹೀಗಿವೆ.

೧) ಶ್ರೀ ಬಸವೇಶ್ವರರ ಚರಿತ್ರೆಯ ಮೇಲೆ ಹೊಸ ಬೆಳಕು

೨) ಲಾಕುಳ ಶೈವ(ಲಕುಲೀಶ ಪಾಶುಪಥ) ಅಥವಾ ಕಾಳಾಮುಖ ಶೈವದ ನಿಜ ಸ್ವರೂಪ

೩) ವೀರಶೈವ ಧರ್ಮದ ಪ್ರವರ್ತಕ ವೀರಭದ್ರ ದೇವರು ದಕ್ಷಯಜ್ಞ ಸಂಹಾರಕ ವೀರಭದ್ರನಲ್ಲ

ಈ ಪ್ರಮುಖ ವಿಷಯಗಳ ಮೇಲೆ ಸಂಶೋಧನೆಯನ್ನು ಕೈಕೊಂಡು ಕೃತಿರೂಪದಲ್ಲಿ ಅವುಗಳನ್ನು ಹೊರತಂದು ಸಮಾಜಕ್ಕೆ ನಿಜವಾದ ಸಂಗತಿಯನ್ನು ತಿಳಿಸುವ ಕಾರ್ಯ ಮಾಡಿದ್ದಾರೆ.

## ಅಡಿ ಟಿಪ್ಪಣಿಗಳು

೧) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೩.

೨) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೭.

೩) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೮.

೪) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೧.

೫) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೫.

೬) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೭

೭) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೪.

೮) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೪.

೯) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೩೯.

೧೦) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೪೦.

೧೧) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೪೦.

೧೨) ಎಂ. ಪಿ. ಪಾಟೀಲರು–ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಗುರುತೊಂಡಧಾರ್ಯ ಸಂಸ್ಥಾನಮಠ ಡಂಬಳ (ಗದಗ) ಲೇಖಕರು ಆರ್. ಎಫ್. ಪಾಟೀಲ & ಡಿ.ಎನ್. ಹುಕ್ಕೇರಿ, ಪು.ಸಂ. ೧೨.

೧೩) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೬.

೧೪) ಉತ್ತಮ ಸಂಸದಿಯ ಪಟು ಎಂಪಿ ಪಾಟೀಲರು,ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ,ಪುಟ ಸಂ.೯.

೧೫) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೪೫.

೧೬) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೪೫.

೧೭) ಎಂ. ಪಿ. ಪಾಟೀಲರ ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೪೬.

೧೮) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೮.

೧೯) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೮.

೨೦) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೮.

೨೧) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೦.

೨೨) ಎಂ. ಪಿ. ಪಾಟೀಲರು–ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಗುರುತೋಂಡಧಾರ್ಯ ಸಂಸ್ಥಾನಮಠ ಡಂಬಳ (ಗದಗ) ಲೇಖಕರು ಆರ್. ಎಫ್. ಪಾಟೀಲ & ಡಿ.ಎನ್. ಹುಕ್ಕೇರಿ. ಪು.ಸಂ. ೨೪

೨೩) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೨.

೨೪) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೩.

೨೫) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೪.

೨೬) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೭.

೨೭) ಎಂ. ಪಿ. ಪಾಟೀಲರು–ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಗುರುತೋಂಡಧಾರ್ಯ ಸಂಸ್ಥಾನಮಠ ಡಂಬಳ (ಗದಗ) ಲೇಖಕರು ಆರ್. ಎಫ್. ಪಾಟೀಲ & ಡಿ.ಎನ್. ಹುಕ್ಕೇರಿ. ಪು.ಸಂ. ೩೫.

೨೮) ಎಂ. ಪಿ. ಪಾಟೀಲರು–ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಗುರುತೋಂಡಧಾರ್ಯ ಸಂಸ್ಥಾನಮಠ ಡಂಬಳ (ಗದಗ) ಲೇಖಕರು ಆರ್. ಎಫ್. ಪಾಟೀಲ & ಡಿ.ಎನ್. ಹುಕ್ಕೇರಿ. ಪು.ಸಂ. ೩೫.

೨೯) ಎಂ. ಪಿ. ಪಾಟೀಲರು ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೫೨.

೩೦) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೧೮.

೩೧) ಪ್ರತಿಭಾವಂತ ಸಂಸಧಿಯ ಪಟು ಪುಸ್ತಕ ಮಾಲಿಕೆ, ಸಂಪಾದಕರು. ಡಾ. ಗುರುಪಾದ. ಎಸ್. ಮರಿಗುದ್ದಿ, ಪು.ಸಂ. ೨೭.

೩೨) ಎಂ. ಪಿ. ಪಾಟೀಲರು–ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಗುರುತೋಂಡಧಾರ್ಯ ಸಂಸ್ಥಾನಮಠ ಡಂಬಳ (ಗದಗ) ಲೇಖಕರು ಆರ್. ಎಫ್. ಪಾಟೀಲ & ಡಿ.ಎನ್. ಹುಕ್ಕೇರಿ, ಪು.ಸಂ. ೧೯.

೩೩) ಎಂ. ಪಿ. ಪಾಟೀಲರು ಆತ್ಮ ಚರಿತ್ರೆ ಮತ್ತು ಲೇಖನಗಳು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ–ಪು.ಸಂ. ೧೧.

೩೪) ಪ್ರತಿಭಾವಂತ ಸಂಸದಿಯಪಟು ಎಂ. ಪಿ. ಪಾಟೀಲರು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ ಪು.ಸಂ. ೨೦.

೩೫) ಪ್ರತಿಭಾವಂತ ಸಂಸದಿಯಪಟು ಎಂ. ಪಿ. ಪಾಟೀಲರು, ಸಂ. ಡಾ. ಗುರುಪಾದ. ಎಸ್. ಮರಿಗುದ್ದಿ ಪು.ಸಂ. ೨೦

ಅಧ್ಯಾಯ ೩

## ಎಂ. ಪಿ. ಪಾಟೀಲರ ಸೃಜನಶೀಲ ಸಾಹಿತ್ಯ

ಒಬ್ಬ ಸತ್ವಶೀಲ ವಿಚಾರವಂತ ಮಾನವತೆಯ ಹರಿಕಾರರಾದ ಎಂ. ಪಿ. ಪಾಟೀಲರು ಕೇವಲ ರಾಜಕೀಯ ಒಂದನ್ನೇ ತಮ್ಮ ಕಾರ್ಯವ್ಯಾಪ್ತಿಯನ್ನಾಗಿ ಮಾಡಿಕೊಳ್ಳಲಿಲ್ಲ. ತಮ್ಮಲ್ಲಿರುವ ಭಾವನೆಗಳಿಗೆ ಮೂರ್ತ ಸ್ವರೂಪವನ್ನು ಕೊಟ್ಟು ಅಕ್ಷರದ ಮೂಲಕ ಆ ಭಾವನೆಗಳನ್ನು ಅಭಿವ್ಯಕ್ತಿಸುವ ಕಾರ್ಯಮಾಡುತ್ತಾರೆ. ಅಂದರೆ ಸೃಜನಶೀಲ ಸಾಹಿತ್ಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಆ ಕಾಲದ ವರ್ತಮಾನದ ವಾಸ್ತವಿಕ ವಿಚಾರಗಳನ್ನು ಭೂತಕಾಲದಲ್ಲಿ ಆಗಿ ಹೋದ ಪುಣ್ಯ ಪುರಷರೊಂದಿಗೆ ಸಮೀಕರಿಸಿ ಅವತ್ತಿನ ಸಮಾಜದ ಬದಲಾವಣೆಗಾಗಿ ಪಣತೊಡುತ್ತಾರೆ. ಅದಕ್ಕೆ ಸೇತುವೆಯೆಂಬಂತೆ ಸಾಹಿತ್ಯಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಅದರ ಫಲವಾಗಿ ಕನ್ನಡ ಹಾಗೂ ಮರಾಠಿ ಭಾಷೆಯಲ್ಲಿ ಲೇಖನಗಳನ್ನು ಬರೆಯಲು ಪ್ರಾರಂಭಿಸುತ್ತಾರೆ. ಇವುಗಳ ಹಿಂದಿನ ಉದ್ದೇಶ ಮರಾಠಿ ಸಂಶೋಧಕರಲ್ಲಿ ಬಸವಣ್ಣನವರ ಕುರಿತಾಗಿ ಇರುವ ಕೆಲವು ತಪ್ಪು ಗ್ರಹಿಕೆಗಳನ್ನು ದೂರಮಾಡುವದಾಗಿತ್ತು. ಈ ನಿಟ್ಟಿನಲ್ಲಿ ಬಸವಣ್ಣನವರ ಕುರಿತಾಗಿ ಹಾಗೂ ವೀರಶೈವ ಧರ್ಮದ ಸಂತರ ಕುರಿತಾಗಿ ಲೇಖನ, ನಾಟಕ, ಕಥೆಗಳನ್ನು ರಚಿಸುತ್ತಾರೆ.

"ಬಸವಣ್ಣ ನನ್ನ ಮಗನಿಗೆ ಬುದ್ದಿಕೊಡಪ್ಪ" ಎಂಬ ಸಣ್ಣ ಕಥೆಯನ್ನು ರಚಿಸಿದ್ದಾರೆ. ಈ ನಾಟಕದ ವಿಷಯವಸ್ತುವನ್ನು ಗಮನಿಸಿದಾಗ ಜಾತಿ ವ್ಯವಸ್ಥೆಯನ್ನು ನೇರವಾಗಿ ಟೀಕಿಸುವ ಕಾರ್ಯ ಇಲ್ಲಿ ಮಾಡಿದ್ದಾರೆ. ಈ ಕಥೆಯಲ್ಲಿ ಪ್ರಮುಖವಾಗಿ ೩ ಪಾತ್ರಗಳು ಬರುತ್ತವೆ. ಒಂದು ಪಾತ್ರದಲ್ಲಿ ಲೇಖಕರು ಮಾನವೀಯತೆಯ ಕೇಂದ್ರಬಿಂದುವಾಗಿ ನಿಂತರೆ, ಭೀಮನ ಪಾತ್ರವು ದಲಿತ ಸಮುದಾಯವನ್ನು ಪ್ರತಿನಿಧಿಸುತ್ತದೆ. ಇನ್ನೊಂದು ಪಾತ್ರ ಚೆನ್ನಯ್ಯ. ಈ ಪಾತ್ರವು ಸಮಾನತೆಯ ಮಂತ್ರವನ್ನು ಕುಲಗೆಡಿಸುವ ಡಂಬಾಚಾರ ಪ್ರತೀಕವಾಗಿ ಜಾತಿಯತೆಯ ಪಟ್ಟಭದ್ರ ಹಿತಾಸಕ್ತಿಯ ಪ್ರತಿನಿಧಿಯಾಗಿ ನಿಲ್ಲುತ್ತದೆ. ಕಥೆಯ ಕೊನೆಯಲ್ಲಿ ಬಸವಣ್ಣನವರನ್ನು ವ್ಯಕ್ತಿಗತವಾಗಿ ನೋಡದೆ ಕಾಯಕತತ್ವದ ಪ್ರತಿನಿಧಿಯಾಗಿ ವಿಶ್ವಮಾನವತೆಯ ಸಂದೇಶವನ್ನು ಸಾರುವ ಸಂತನಂತೆ ಕಾಣಬೇಕು ಎಂಬ ನಿಲುವಿನೊಂದಿಗೆ ಕಥೆಯು ಮುಕ್ತಾಯವಾಗುತ್ತದೆ.

ಎಂ. ಪಿ. ಪಾಟೀಲರು 'ನನ್ನ ಜೀವನ ಚರಿತ್ರೆ' ಎಂಬ ತಮ್ಮ ಜೀವನದ ಕುರಿತಾದ ಆತ್ಮ ಚರಿತ್ರೆಯೊಂದನ್ನು ರಚಿಸಿದ್ದಾರೆ. ಅದು ಅಪೂರ್ಣವಾಗಿದೆ. ಎಂ. ಪಿ. ಪಾಟೀಲರು ತಮ್ಮ ಜೀವಿತಾವಧಿಯ ದಿನಗಳಲ್ಲಿ ತಮ್ಮ ಜೀವನದ ಕುರಿತಾದ

ಚರಿತ್ರೆಯನ್ನು ಬರೆಯಲು ಪ್ರಾರಂಭಿಸುತ್ತಾರೆ. ಇದರಲ್ಲಿ ತಾವು ಹುಟ್ಟಿದಾಗಿನಿಂದ ಹಿಡಿದು ಕಷ್ಟಪಟ್ಟು ಬೆಳೆದದ್ದು, ಶಿಕ್ಷಣ ಪಡೆದದ್ದು, ವೈವಾಹಿಕ, ರಾಜಕೀಯ, ಕೌಟುಂಬಿಕ, ವೃತ್ತಿಜೀವನದ ಕುರಿತಾಗಿ ತಮ್ಮ ಅನುಭವಗಳ ಯಶೋಗಾಥೆಯನ್ನು ಹಂಚಿಕೊಂಡಿದ್ದಾರೆ. ಎಂ. ಪಿ. ಪಾಟೀಲರು ಭಕ್ತಿ ಬಂಢಾರಿ ಬಸವಣ್ಣ ಎಂಬ ನಾಟಕವನ್ನು ರಚಿಸಿದ್ದಾರೆ. ಈ ನಾಟಕ ಬಸವಣ್ಣನವರು ಭೂಮಿಗೆ ಇಳಿದು ಬಂದುದ್ದರ ಮುಖ್ಯ ಉದ್ದೇಶ ಏನಾಗಿತ್ತು ಮತ್ತು ಅವರು ಮಾಡಿದಂತ ಸಾಧನೆಗಳ ಮೇಲೆ ಬೆಳಕು ಚೆಲ್ಲುತ್ತದೆ. ನಾಟಕ ಬಸವಣ್ಣನವರ ಪರಿಚಯದೊಂದಿಗೆ ಆರಂಭವಾಗುತ್ತದೆ. ಬಸವಣ್ಣವರು ಯಾರು? ಮತ್ತು ಅವರ ಕರ್ತವ್ಯ ಏನಾಗಿತ್ತು. ಸಮಾಜೋದ್ಧಾರಕ್ಕಾಗಿ ಶಿವ ಅವರನ್ನು ಭೂಮಿಗೆ ಕಳಿಹಿಸಿದ ರೀತಿ ಇವೆಲ್ಲಾ ಅಂಶಗಳನ್ನು ನಾಟಕದಲ್ಲಿ ಕಾಣುತ್ತವೆ. ಅತೀ ಸೊಗಸಾದ ನಿರೂಪಣೆಯ ಮೂಲಕ ಸ್ವರ್ಗಲೋಕ ಮತ್ತು ಭೂಲೋಕದ ನಡುವಿನ ಅಂತರವನ್ನು ಅರಿತು ಈ ನಾಟಕದಲ್ಲಿ ಪಾತ್ರಗಳನ್ನು ಸೃಷ್ಟಿಸಿದ್ದಾರೆ.

ಮಾನವತೆಯ ದೃಢ ಸಂಕಲ್ಪವನ್ನು ಮಂದಿಟ್ಟುಕೊಂಡು ಬಸವಣ್ಣನವರು ತಮ್ಮ ಬ್ರಾಹ್ಮಣ ಜಾತಿಯ ದೈವಿ ಆಚರಣೆಗಳನ್ನು ಬದಿಗೊತ್ತಿ ಲಿಂಗ ರೂಪದ ದೇವರ ಸಾಕ್ಷಾತ್ಕಾರಕ್ಕಾಗಿ ಸಿದ್ಧರಾಗುತ್ತಾರೆ. ಮನೆ ಮತ್ತು ಹೆತ್ತವರನ್ನು ಬಿಟ್ಟು ದೇವರ ಅಸ್ತಿತ್ವವನ್ನು ಕಂಡುಕೊಳ್ಳುವ ರೀತಿಯನ್ನು ಎಂ. ಪಿ. ಪಾಟೀಲರು ಈ ನಾಟಕದಲ್ಲಿ ಬಹಳ ಸೊಗಸಾಗಿ ಚಿತ್ರಿಸಿದ್ದಾರೆ.

**೩.೧ ಲೇಖನಗಳು-ಕನ್ನಡ ಮತ್ತು ಮರಾಠಿ:**

ಎಂ. ಪಿ. ಪಾಟೀಲರು ಕನ್ನಡ ಮತ್ತು ಮರಾಠಿ ಭಾಷೆಯಲ್ಲಿ ಲೇಖನಗಳನ್ನು ಬರೆದಿರುತ್ತಾರೆ. ಅವರ ಪತ್ರಿಕೆಯ "ಧ್ಯೇಯ ಧೋರಣೆ" ಎಂಬ ಲೇಖನದಲ್ಲಿ ಪತ್ರಿಕೆಗಳು ನಿರ್ವಹಿಸುವ ಗುರುತರ ಜವಾಬ್ದಾರಿಗಳೇನು, ಒಂದು ಪತ್ರಿಕೆ ಹುಟ್ಟಿಕೊಂಡ ಉದ್ದೇಶ ಸಮರ್ಪಕವಾಗಿ ಈಡೇರಿದೆಯೋ ಅಥವಾ ಇಲ್ಲವೊ- ಸಮಾಜದಲ್ಲಿ ಪತ್ರಿಕೆಗಳು ಮಾಡಬೇಕಾದ ಕಾರ್ಯ ಕ್ಷಮತೆ, ಎಂಥದು ಎಂಬ ವಿಚಾರಗಳನ್ನು ಈ ಲೇಖದಲ್ಲಿ ಚರ್ಚಿಸಿರುತ್ತಾರೆ. 'ಪ್ರಜಾ ಪ್ರಭುತ್ವದ ಮನ್ವಂತರದಲ್ಲಿ ಸಮಾಜವು ಅದರ ಸುಬಧ್ರ ಮತ್ತು ವಿಶಾಲವಾದ ತಳಹದಿಯ ಮೇಲೆ ಕಟ್ಟಲ್ಪಟ್ಟು ಅದರಿಂದ ಜನತೆಗೆ ಸುಖ ಸೌಲಭ್ಯಗಳು ದೊರೆಯಬೇಕಾದರೆ ಪ್ರಜಾ ಪ್ರಭುತ್ವದ ಬಗ್ಗೆ ಜನರಲ್ಲಿ ನಿಜವಾದ ತಿಳುವಳಿಕೆ ಹುಟ್ಟಿಸುವ ಲೋಕ ಶಿಕ್ಷಣವು ಅವಶ್ಯಕವಾಗಿರುತ್ತದೆ'. ಪತ್ರಿಕೆಗಳಲ್ಲಿ ಕೇವಲ ಸಾಮಾಜಿಕ ರಾಜಕೀಯ ಸಾಂಸ್ಕೃತಿಕ ವಿಚಾರಗಳನ್ನು ಮಾತ್ರ ಬಿತ್ತರಿಸದೆ ಜನರಿಗೆ ಅವಶ್ಯಕವಿರುವ ಮತ್ತು ಅವರನ್ನು ಸನ್ನಡತೆ ಸನ್ಮಾರ್ಗದತ್ತ

ಕೊಂಡೊಯ್ಯುವ ಪತ್ರಿಕೆಗಳ ಉಗಮ ಆಗಬೇಕಾಗಿರುತ್ತದೆ. ಅಂದರೆ ಜನರ ಮನಸ್ಸನ್ನು ಅರಿಯವಂತಹ ಕಾರ್ಯವನ್ನು ಪತ್ರಿಕೆಗಳು ಮಾಡಬೇಕಾಗಿದೆ. ಆಗ ಪತ್ರಿಕೆಗಳ ನಿಜವಾದ ಉದ್ದೇಶ ಈಡೇರಿದಂತೆ ಆಗುತ್ತದೆ. ಎಂಬ ಅರ್ಥಪೂರ್ಣವಾದ ವಿಚಾರಗಳನ್ನು ಈ ಲೇಖನದಲ್ಲಿ ಚರ್ಚಿಸಿರುತ್ತಾರೆ.

ಎಂ. ಪಿ. ಪಾಟೀಲರು 'ಧರ್ಮ ನಿರಪೇಕ್ಷಿತ ರಾಜ್ಯ' ಎಂಬ ಲೇಖನದಲ್ಲಿ ಧರ್ಮಕ್ಕಿರುವ ಸ್ಥಾನಮಾನಗಳನ್ನು ಹೇಳುತ್ತಾರೆ. ವೈವಿಧ್ಯತೆಯಿಂದ ಕೂಡಿದ ಭಾರತದಂತಹ ದೇಶದಲ್ಲಿ ಅನೇಕ ಧರ್ಮಗಳಿದ್ದು ಆ ಧರ್ಮದ ತತ್ವಗಳನ್ನು, ಸಿದ್ಧಾಂತಗಳನ್ನು ಎತ್ತಿಹಿಡಿದರೆ ಮಾತ್ರ ಪ್ರಜಾ ಪ್ರಭುತ್ವದ ಮೌಲ್ಯಗಳಿಗೆ ಬೆಲೆ ಬರುತ್ತದೆ. ಧರ್ಮವನ್ನು ಅಲಕ್ಷಿಸಿದ್ದೇ ಆದರೆ ಪ್ರಜಾ ಪ್ರಭುತ್ವದ ವ್ಯವಸ್ಥೆಗೆ ಹಿನ್ನಡೆಯುಂಟಾಗುತ್ತದೆ. ಆದ್ದರಿಂದ ಧರ್ಮವನ್ನು ರಕ್ಷಿಸುವುದರ ಜೊತೆಗೆ ಪ್ರಜಾ ಪ್ರಭುತ್ವನ್ನು ಎತ್ತಿ ಹಿಡಿಯುವುದೇ ಈ ಲೇಖನದ ಉದ್ದೇಶವಾಗಿದೆ.

ಮನುಷ್ಯ ನಿಸರ್ಗದ ಕೂಸು, ಧರ್ಮ ಸಮಾಜದ ಮುಖ್ಯ ಅಂಗ. ಈ ಧರ್ಮ ಮತ್ತು ಮನುಷ್ಯರ ನಡುವಿನ ಅಂತರವನ್ನು ಗುರುತಿಸುವಲ್ಲಿ ನಿಸರ್ಗದ ಪ್ರಾಮುಖ್ಯತೆಯ ಮಹತ್ವವೆಷ್ಟು ಎಂಬುದನ್ನು ಬಿಡಿಸಿಡುವ ಪ್ರಯತ್ನವನ್ನು ಎಂ. ಪಿ. ಪಾಟೀಲರು ಮಾಡಿದ್ದಾರೆ. ಪ್ರಾಚೀನಕಾಲದಲ್ಲಿ ಧರ್ಮದ ಮಾರ್ಗದರ್ಶನದ ಮೇಲೆ ರಾಜ್ಯದ ಆಡಳಿತ ವ್ಯವಸ್ಥೆ ನಿಯಂತ್ರಿಸಲ್ಪಡುತ್ತಿತ್ತು. ಯಾವಾಗ ಭಾರತಕ್ಕೆ ಬ್ರಿಟೀಷರ ಆಗಮನವಾಯಿತೋ ಆಗ ಧರ್ಮವು ಸಾಂಪ್ರದಾಯಿಕ ಚೌಕಟ್ಟಿನಲ್ಲಿ ಮನೆಮಾಡಿತು. ಕಾರಣ ಬ್ರಿಟೀಷರ ಒಡೆದು ಆಳುವ ನೀತಿಯಿಂದಾಗಿ. ಆಗ ಧರ್ಮ ರಾಜಕೀಯದಿಂದ ಸಾವಕಾಶವಾಗಿ ದೂರ ಸರಿಯಲು ಪ್ರಾರಂಭಿಸಿತು. "ಧರ್ಮೋ ರಕ್ಷಿತೆ, ರಕ್ಷಿತಃ" ಎಂಬ ಭಗವತ್ ಗೀತೆಯ ಈ ಸಾಲಿನಂತೆ ಧರ್ಮವನ್ನು ನಾವು ರಕ್ಷಿಸಿದರೆ, ಧರ್ಮ ನಮ್ಮನ್ನು ರಕ್ಷಿಸುತ್ತದೆ. ಇದೇ ತಳಹದಿಯ ಮೇಲೆ ಮಹಾತ್ಮಾ ಗಾಂಧೀಜಿಯವರು ಸತ್ಯ ಮತ್ತು ಅಹಿಂಸೆ ಎಂಬ ಎರಡು ಮಂತ್ರಗಳ ಮೂಲಕ ದೇಶಕ್ಕೆ ಸ್ವಾತಂತ್ರ ತಂದು ಕೊಟ್ಟಿದ್ದಾರೆ. ಆದರೆ ಆ ಸ್ವಾತಂತ್ರ ಸ್ವೇಚ್ಛಾಚಾರವಾಗಿ ದೇಶದಲ್ಲಿ ಭ್ರಷ್ಟತೆ, ಅನೈಕ್ಯತೆ ತುಂಬಿತುಳುಕಲು ಪ್ರಾರಂಭಿಸಿದೆ. ಅದಕ್ಕೆ ಪ್ರಮುಖ ಕಾರಣ ಧರ್ಮ ಮತ್ತು ನೀತಿಗಳನ್ನು ಹೊರಗಿಟ್ಟು ಆಡಳಿತ ನಡೆಸಿದ್ದರ ಪರಿಣಾಮ ಇದರಿಂದ ಈ ದೇಶಕ್ಕೆ ಇಂತ ಗತಿ ಬಂದಿರುತ್ತದೆ. ಎಂದು ಹೇಳುವ ಸಂದರ್ಭದಲ್ಲಿ ಧರ್ಮದ ಶ್ರೇಷ್ಠತೆಯನ್ನು ಈ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ. ಮುಂದುವರೆದು ಧರ್ಮದ ಶ್ರೇಷ್ಠತೆಯನ್ನು ಹೇಳುತ್ತಾ ಧರ್ಮವನ್ನು ಹೊರಗಿಟ್ಟು ಕಾನೂನನ್ನು ರೂಪಿಸಿ ಅದರಿಂದ ಮನುಷ್ಯನ ಮನಸ್ಸನ್ನು ಹತೋಟಿಯಲ್ಲಿಡಬಹುದು. ಆದರೆ ಅದು ಅಷ್ಟು ಪರಿಣಾಮಕಾರಿ ಆಗಲಾರದು. ಮನುಷ್ಯರಲ್ಲಿ ಪ್ರಾಮಾಣಿಕತೆ ಸದಾಚಾರ,

ಬೆಳೆಯಬೇಕಾದರೆ, ಮತ್ತು ಉಳಿಯಬೇಕಾದರೆ ಅದು ಕೇವಲ ಧರ್ಮದ ತತ್ವಗಳಿಂದ ಮತ್ತು ಸಿದ್ಧಾಂತಗಳಿಂದ ಮಾತ್ರ ಸಾಧ್ಯವಾಗಿರುತ್ತದೆ. 'ಸಮಾಜದಲ್ಲಿ ಧಾರ್ಮಿಕ ಮತ್ತು ನೈತಿಕ ಮಟ್ಟ ಬೆಳೆಯದೇ ಹೋದರೆ'[೨], ಸಮಾಜದ ಸರ್ವಾಂಗೀಣ ಪ್ರಗತಿ ಆಗಲಾರದು. ಒಂದು ದೇಶ ಅಭಿವೃದ್ದಿ ಹೊಂದಬೇಕಾದರೆ ಧರ್ಮದ ನಿಯಮಗಳು ಅತ್ಯಂತ ಪ್ರಮುಖ ಪಾತ್ರವಹಿಸಿರುತ್ತದೆ ಎಂಬುದೇ ಈ ಲೇಖನದ ಉದ್ದೇಶ ಮತ್ತು ಎಂ. ಪಿ. ಪಾಟೀಲರ ಅಭಿಮತವಾಗಿರುತ್ತದೆ.

ಸಾಮಾಜಿಕ ಕ್ಷೇತ್ರದಲ್ಲಿ ಪ್ರಜಾ ಪ್ರಭುತ್ವದ ಮೌಲ್ಯಗಳಿಗೆ ಬೆಲೆ ಬರಬೇಕಾದರೆ ದೇಶದಲ್ಲಿ ಅಶಾಂತಿ, ಕಲಹವನ್ನುಂಟು ಮಾಡುವ ರಾಷ್ಟ್ರಘಾತಕ ಶಕ್ತಿಗಳು ದೂರವಾಗಬೇಕು. ರಾಷ್ಟ್ರದಲ್ಲಿ ಐಕ್ಯತೆಯನ್ನು ಮರುಸ್ಥಾಪಿಸಬೇಕಾದಲ್ಲಿ, ಇಂತಹ ಅನಾಹುತಕಾರಿ ಘಟನೆಗಳನ್ನು ತಡೆಗಟ್ಟುವ ಕಾರ್ಯ ಪ್ರಸ್ತುತ ಭಾರತೀಯರಿಂದ ಆಗಬೇಕಾಗಿರುತ್ತದೆ. ಆದರೆ ಆ ನಿಟ್ಟಿನಲ್ಲಿ ಕಾರ್ಯಗಳು ನಡೆಯುತ್ತಿಲ್ಲ ಎಂಬುದು ವಿಷಾದದ ಸಂಗತಿಯಾಗಿದೆ. ಜನತೆ ಪ್ರಸ್ತುತ ಇರುವ ರಾಜಕೀಯ ವ್ಯವಸ್ಥೆಯಿಂದ ರೋಸಿ ಹೋಗಿದ್ದಾರೆ. ಇದರಿಂದ ಜನರಲ್ಲಿ ಪ್ರಜಾ ಪ್ರಭುತ್ವದ ಮೇಲಿದ್ದ ಅಲ್ಪ ಸ್ವಲ್ಪ ನಂಬಿಕೆಯು ಬರಬರುತ್ತ ಕಡಿಮೆಯಾಗತೊಡಗಿದೆ.

ಎಂ. ಪಿ. ಪಾಟೀಲರು ರಾಜಕೀಯ ಧರ್ಮದ ನಿಜವಾದ ಪರಿಕಲ್ಪನೆಯನ್ನು ಕೊಡುತ್ತಾರೆ. ಪ್ರಮಾಣ ವಚನಕ್ಕೆ ಬದ್ಧನಾಗಿ ನೈತಿಕವಾಗಿ ಕಾರ್ಯೋನ್ಮುಖವಾಗುವದೇ ನಿಜವಾದ ರಾಜಕೀಯ ಧರ್ಮವಾಗಿದೆ. ಆದರೆ ವರ್ತಮಾನದ ರಾಜಕೀಯ ವಿಷಯಗಳ ಚರ್ಚೆ ಬಂದಾಗ ನಮ್ಮ ರಾಜಕೀಯ ನಾಯಕರು ಮೇಲಿನ ವ್ಯಾಖ್ಯೆಯನ್ನು ಜಾರಿಗೆ ತರುವಲ್ಲಿ ಹಿಂದೆ ಸರಿಯುತ್ತಿದ್ದಾರೆ. ಆದ್ದರಿಂದಲೇ ಜನತೆ ಪ್ರಜಾಪ್ರಭುತ್ವದ ಮೇಲೆ ನಂಬಿಕೆ ಕಳೆದುಕೊಳ್ಳುತ್ತಿದ್ದಾರೆ. ಮಹಾನ್ ದೇಶಭಕ್ತರು ಚಿಂತಕರು ಹೇಳಿಕೊಟ್ಟ ಸಂದೇಶಗಳನ್ನು ಸ್ಮರಿಸಿಕೊಂಡು ಅವುಗಳಿಗೆ ಪೂರಕವಾಗಿ ನಡೆದುಕೊಂಡದ್ದೇ ಆದರೆ ಪ್ರಜಾಪ್ರಭುತ್ವಕ್ಕೆ ಖಂಡಿತ ಬೆಲೆ ಬರುತ್ತದೆ. ಆವಾಗ ಧರ್ಮಕ್ಕೂ ಕೀರ್ತಿ ಬರುತ್ತದೆ. ಎಂದು ಪ್ರಜಾಪ್ರಭುತ್ವದ ಮೌಲ್ಯಗಳ ಕುರಿತಾಗಿ ಈ ಲೇಖನದಲ್ಲಿ ಚರ್ಚಿಸಿರುತ್ತಾರೆ.

ಸಮಾಜವಾದಿತ್ವದ ಸಮಾಜ ಸ್ಥಾಪನೆಯು ಕೇವಲ ಸರಕಾರದಿಂದ ಮಾತ್ರ ಸಾಧ್ಯವಾಗುವದಿಲ್ಲ. ಅದು ಸಮಾಜದಲ್ಲಿರುವ ಪ್ರತಿಯೊಬ್ಬ ಪ್ರಜೆಯ ಕರ್ತವ್ಯವೂ ಹೌದು. ಸ್ವತಂತ್ರ ಭಾರತವು ನಿರೀಕ್ಷಿಸಿದಷ್ಟು ಅಭಿವೃದ್ಧಿ ಹೊಂದಿರುವದಿಲ್ಲ. ಕಾರಣ ಬಡತನ, ಅನಕ್ಷರತೆ ಜನರಿಗೆ ಬೇಕಾದ ಜೀವನಾವಶ್ಯಕ ವಸ್ತುಗಳ ಉತ್ಪಾದನೆಯ ಕೊರತೆಗಳು ಮುಖ್ಯ ಸಮಸ್ಯೆಯಾಗಿರುತ್ತವೆ. ಒಂದು ದೇಶ ಅಭಿವೃದ್ಧಿ ಹೊಂದಿದೆ ಎಂದರೆ ಆ ದೇಶದಲ್ಲಿ ವಾಸಿಸುವ ಜನರು ಬಡತನದಿಂದ ಮುಕ್ತವಾಗದಿದ್ದರೂ

ಪರವಾಗಿಲ್ಲ, ತಮಗೆ ಬದುಕಲಿಕ್ಕೆ ಬೇಕಾದೆ ಎರಡು ಹೊತ್ತಿನ ಊಟವನ್ನಾದರೂ ಸಂಪಾದಿಸಿಕೊಳ್ಳುವಷ್ಟು ಶಕ್ತಿವಂತರಾಗಿರಬೇಕು. ಅವಾಗ ದೇಶವನ್ನು ಅಭಿವೃದ್ಧಿ ಹೊಂದಿದ ದೇಶಗಳ ಸಾಲಿಗೆ ಸೇರಿಸಬಹುದು. ಇದರಿಂದ ಸಮಾಜ ಮತ್ತು ಸಮುದಾಯಕ್ಕೂ ಒಂದು ಅರ್ಥಬರುತ್ತದೆ. ಗಾಂಧೀಜಿಯವರು ಕಂಡ ರಾಮರಾಜ್ಯದ ಕನಸು ಜಾರಿಗೆ ಬರುವಲ್ಲಿ ಇಂಥಹ ಸಮಾಜವಾದಿತ್ವದ ಅವಶ್ಯಕತೆಯು ಅಗಾಧವಾಗಿರುತ್ತದೆ. ಎಂದು ಹೇಳುವ ಸಂದರ್ಭದಲ್ಲಿ ಮೇಲಿನಂತೆ ತಮ್ಮ ಲೇಖನದಲ್ಲಿ ಚರ್ಚಿಸಿರುತ್ತಾರೆ.

೧೨ ನೇ ಶತಮಾನದಲ್ಲಿ ಸಾಮಾಜಿಕಕ್ರಾಂತಿ ಮಾಡುವದರ ಮೂಲಕ ಜಗತ್ತಿಗೆ ಸಮಾನತೆಯ ಮಂತ್ರವನ್ನು ಸಾರಿದ ಬಸವಣ್ಣ, ಎಂಟನೂರು ವರ್ಷಗಳ ತರುವಾಯ ಬ್ರಿಟೀಷರ ವಿರುದ್ಧ ಹೋರಾಡಿದ ಮಹಾತ್ಮಾ ಗಾಂಧೀಜಿ ಈ ಇಬ್ಬರ ವಿಚಾರಗಳನ್ನು ಒಟ್ಟಿಗೆ ಸಮೀಕರಿಸಿ ಹೇಳಿರುತ್ತಾರೆ. ಸಮಾಜದ ಪರಿವರ್ತನೆಗಾಗಿ ಈ ಇಬ್ಬರು ಮಹಾತ್ಮರು ಕಂಡಂತ ಕನಸುಗಳು ಒಂದೇ ತೆರನಾಗಿರುತ್ತವೆ. ಬಸವಣ್ಣನವರು ಅನುಭವ ಮಂಟಪವನ್ನು ಸ್ಥಾಪಿಸುತ್ತಾರೆ. ಅಲ್ಲಿ ಎಲ್ಲ ಜಾತಿಯ ಜನರನ್ನು ಒಂದು ಕಡೆ ಸೇರಿಸಿ ಸಮಾನತೆಯಿಂದ ಕೂಡಿದ ಶರಣ ಸಮಾಜವನ್ನು ನಿರ್ಮಿಸಿರುತ್ತಾರೆ. ಅದರಂತೆ ಮಹಾತ್ಮಾ ಗಾಂಧಿಜಿಯವರು ಬ್ರೀಟಿಷರ ದಬ್ಬಾಳಿಕೆಯಲ್ಲಿ ನಲಗುತ್ತಿರುವ ಭಾರತಮಾತೆಯನ್ನು ಬಂದ ಮುಕ್ತಗೊಳಿಸಿ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟಿರುತ್ತಾರೆ. ಬಸವಣ್ಣನವರು ಕಾಯಕ ಸಿದ್ಧಾಂತವನ್ನು ಪ್ರತಿಪಾದಿಸಿದರೆ ಗಾಂಧಿಜಿಯವರು ಸತ್ಯ ಮತ್ತು ಅಹಿಂಸೆ ಎಂಬ ಮಂತ್ರಗಳ ಕುರಿತು ಪ್ರತಿಪಾದಿಸಿರುತ್ತಾರೆ. ಇವರಿಬ್ಬರ ಕಾಲ ಬೇರೆ ಆದರೂ ಉದ್ದೇಶ ಮಾತ್ರ ಒಂದೇ ಆಗಿತ್ತು. ಅದು ಸಮಾಜದಲ್ಲಿ ಐಕ್ಯತೆಯನ್ನು ಮೂಡಿಸಿ ಸಮಾನತೆಯನ್ನು ತರುವುದು.

ಎಂ. ಪಿ. ಪಾಟೀಲರು ಹೇಳುವಂತೆ ಸ್ವಾಸ್ಥ್ಯ ಸಮಾಜದ ನಿರ್ಮಾಣಕ್ಕಾಗಿ 'ಸಮಾಜದ ಸರ್ವಾಂಗೀಣ ಅಭಿವೃದ್ಧಿಗಾಗಿ ಇವರು ಕೈಗೊಂಡ ಕಾರ್ಯಗಳೆಲ್ಲವೂ ಸಾಂಪ್ರತ ಪರಿಸ್ಥಿತಿಯಲ್ಲಿಯೂ ನಮಗೆ ಅತ್ಯಂತ ಸಹಾಯಕಾರಿಯಾಗಿವೆ'[೨]. ಎಂದು ಹೇಳುವ ಸಂದರ್ಭದಲ್ಲಿ ಈ ವ್ಯಕ್ತಿಗಳ ಮಹತ್ವವನ್ನು ತಮ್ಮ ಲೇಖನದಲ್ಲಿ ಚರ್ಚಿಸಿರುತ್ತಾರೆ.

'೧೯೭೬ ರಲ್ಲಿ ಸಂವಿಧಾನಕ್ಕೆ ೪೨ ತಿದ್ದುಪಡಿ ತರುವದರ ಮೂಲಕ ಭಾರತದ ಸಂವಿಧಾನದ ಪೂರ್ವ ಪೀಠಿಕೆಯಲ್ಲಿ ಸಮಾಜವಾದ ಮತ್ತು ಜಾತ್ಯಾತೀತ ಎಂಬ ಪದಗಳನ್ನು ಸೇರಿಸಿರುತ್ತಾರೆ'[೩]. ನಿಜವಾದ ಅರ್ಥದಲ್ಲಿ ಸಮಾಜವಾದ ಪದದ ಅರ್ಥವನ್ನು ಹುಡುಕಲು ಹೊರಟರೆ, ನಮಗೆ ಸಿಗುವ ಅರ್ಥ ಸಮಾಜದ ಸುಧಾರಣೆ. ಇಂಥ ಸಮಾಜದ ಸುಧಾರಣೆಗಾಗಿ ಸರಕಾರವನ್ನು ಹೊರತುಪಡಿಸಿದರೆ

ಕೆಲವೊಂದು ಮಹಾನ ವ್ಯಕ್ತಿಗಳು ಸಂಘ-ಸಂಸ್ಥೆಗಳನ್ನು ಕಟ್ಟಿಕೊಂಡು ದುಡಿದಿದ್ದಾರೆ. ಅಂಥಹ ಮಹನೀಯರ ಸಾಲಿಗೆ ಸೇರುವ ಮುಖ್ಯವಾದ ಹೆಸರು ಆಚಾರ್ಯ ವಿನೋಭಾ ಭಾವೆ. ಈ ವ್ಯಕ್ತಿಗಳ ಕುರಿತಾಗಿ ಎಂ. ಪಿ. ಪಾಟೀಲರು, ತಾವು ಇವರಲ್ಲಿ ಕಂಡಂತಹ ವಿಚಾರ, ಸಿದ್ಧಾಂತಗಳನ್ನು 'ಸಮಾಜವಾದಿ ಸಮಾಜಸ್ಥಾಪನೆಯ ಆದ್ಯಜನಕ' ಎಂಬ ಲೇಖನದಲ್ಲಿ ಹೇಳಿರುತ್ತಾರೆ.

ಎಂ. ಪಿ. ಪಾಟೀಲರು ಜನರಲ್ಲಿ ಸಮಾಜವಾದಿ ಪದದ ಬಗೆಗೆ ಇದ್ದ ತಪ್ಪು ಗ್ರಹಿಕೆಯನ್ನು ದೂರಮಾಡುತ್ತಾರೆ. ನಿಜವಾದ ಸಮಾಜವಾದದ ಅರ್ಥವನ್ನು ಪ್ರಜಾಪ್ರಭುತ್ವದ ತಳಹದಿಯಮೇಲೆ ಹೇಗೆ ನಿರ್ಮಿಸಬೇಕೆಂದು ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಒಂದು ಅರ್ಥದಲ್ಲಿ ಪಾಶ್ಚಾತ್ಯ ಸ್ವರೂಪದ ಸಮಾಜವಾದವನ್ನೇ ನಿಜವಾದ ಸಮಾಜವಾದವೆಂದು ನಂಬಿದ್ದ ಜನರಲ್ಲಿಯ ಗೊಂದಲವನ್ನು ದೂರಮಾಡುತ್ತಾರೆ. ಭಾರತೀಯತೆಯ ನಿಜವಾದ ಸಮಾಜವಾದ ಎಂಥಹದು ಎಂಬ ಪರಿಕಲ್ಪನೆಯನ್ನು ವಿನೋಭಾ ಭಾವೆ ಈ ಲೇಖನದಲ್ಲಿ ನೀಡಿರುತ್ತಾರೆ. 'ಆದರ್ಶ ಸಮಾಜವಾದಿ ಸಮಾಜ ಸ್ಥಾಪನೆಯಾಗಬೇಕಾದರೆ ಸಾಮಾಜಿಕ, ಧಾರ್ಮಿಕ, ಆರ್ಥಿಕ, ಸಾಂಸ್ಕೃತಿ ಮುಂತಾದ ಸಮಾಜ ಜೀವನದ ಇತರೆ ಕ್ಷೇತ್ರಗಳಲ್ಲಿ ಈ ಮೂಲಭೂತ ಸಿದ್ಧಾಂತಗಳು ಬಳಕೆಯಾಗುವುದು ಅವಶ್ಯಕವಿದೆ'[೫]. ಎಂಬ ಇವರ ಮಾತು ಔಚಿತ್ಯಪೂರ್ಣವಾಗಿದೆ. ಸಮಾಜ ಸುಧಾರಣಾ ಚಳುವಳಿಗಳ ಮೂಲಕ ಸಮಾಜವಾದದ ಮೌಲ್ಯಗಳನ್ನು ಎತ್ತಿ ಹಿಡಿಯುವಲ್ಲಿ ವಿನೋಭಾ ಭಾವೆ ಅಂತಹ ಸಮಾಜ ಸುಧಾರಕರು ಬಹಳ ಪ್ರಮುಖ ಪಾತ್ರವಹಿಸಿದ್ದಾರೆ. ಇಂತಹ ವ್ಯಕ್ತಿಗಳು ಹೇಳಿರುವ ಸಿದ್ಧಾಂತಗಳ ಆಧಾರಗಳ ಮೇಲೆ ಸಂವಿಧಾನದ ಪೂರ್ವ ಪೀಠಿಕೆಯಲ್ಲಿ ಈ ಪದಗಳನ್ನು ಸೇರಿಸಿರುತ್ತಾರೆ. ಈ ಲೇಖನ ರಚಿಸುವುದರ ಮೂಲಕ ಎಂ. ಪಿ. ಪಾಟೀಲರು ಮಾನವತ್ವದ ಮೂಲ ತಳಹದಿಯನ್ನು ಫಲಕಾರಿಯಾಗಿಸುವಲ್ಲಿ ಯಶಸ್ವಿಯಾಗಿದ್ದಾರೆ.

**ಗುರುದೇವ ರಾನಡೆ :**

ಭಾರತೀಯ ಸಂತ ಪರಂಪರೆಯಲ್ಲಿ ಗುರುದೇವ ರಾನಡೆ ಅತ್ಯುನ್ನತವಾದ ಸ್ಥಾನವನ್ನು ಪಡೆದಿದ್ದಾರೆ. ಕರ್ನಾಟಕದ ಶ್ರೇಷ್ಠ ಸಂತರಾದ ಗುರುದೇವ ರಾನಡೆ ಅವರ ೧೧ ನೇ ಪುಣ್ಯ ತಿಥಿಯ ಶುಭ ಸಂದರ್ಭದಲ್ಲಿ ಅವರು ಮಾಡಿದ ಮಹತ್ಕಾರ್ಯವನ್ನು ಜನಮಾನಸಕ್ಕೆ ತಿಳಿಸುವ ಉದ್ದೇಶದಿಂದ ಎಂ. ಪಿ. ಪಾಟೀಲರು ಈ ಲೇಖನವನ್ನು ರಚಿಸಿದ್ದಾರೆ.

ರಾನಡೆಯವರು 'ಕರ್ನಾಟಕ ರಾಜ್ಯದ ವಿಜಾಪೂರ ಜಿಲ್ಲೆಯ, ಜಮಖಂಡಿಯಲ್ಲಿ ಜನಿಸುತ್ತಾರೆ'[೬]. ತಮ್ಮ ಅಮೋಘ ಪ್ರತಿಭಾಶಕ್ತಿಯ ಮೂಲಕ ಗಣ್ಯ ಪದವಿಗೆ ಏರುತ್ತಾರೆ. ಉತ್ತಮ ಶಿಕ್ಷಣವನ್ನು ಪಡೆದು ಶ್ರೇಷ್ಠ ಸಂತರ ತತ್ವಜ್ಞಾನಿಗಳ ಸಂಘದಲ್ಲಿ ತಮ್ಮನ್ನು ತೊಡಗಿಸಿಕೊಂಡು ಆಧ್ಯಾತ್ಮಿಕತೆಯ ಹರಿಕಾರರಾಗಿ ಸಮಾಜೋದ್ಧಾರಕ ಕಾರ್ಯಗಳನ್ನು ಮಾಡಿದ್ದಾರೆ. ಡೆಕ್ಕನಎಜ್ಯೂಕೇಶನ ಸೋಸಾಯಟಿಯಲ್ಲಿ ಕಾರ್ಯನಿರ್ವಹಿಸುತ್ತ ಭಕ್ತಿಮಾರ್ಗ ಮತ್ತು ಥಿಯಾಸಾಫಿಕ್ ಪಂಥದ ಸ್ಥಾಪಕರಾದ ಅನಿಬೆಸಂಟರ ನಿಕಟ ಸಂಪರ್ಕದೊಂದಿಗೆ ಮೇಧಾವಿ ತತ್ವಜ್ಞಾನಿಯಾಗಿ ಹೊರಹೊಮ್ಮುತ್ತಾರೆ. ಶೈಕ್ಷಣಿಕ ಕ್ಷೇತ್ರದಲ್ಲಿ ಇವರು ಅಸಾಮಾನ್ಯ ಯಶಸ್ಸು ಸಾಧಿಸಿದ್ದರಿಂದ ಕೆಲಸವೇ ಇವರನ್ನು ಹುಡುಕಿಕೊಂಡು ಬರುತ್ತದೆ. ಅಲಹಾಬಾದ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರೆಂದು ಕಾರ್ಯ ನಿರ್ವಹಿಸುತ್ತಾರೆ. ಜೀವನದ ಮಧ್ಯಂತರ ಅವಧಿಯಲ್ಲಿ ಮನಸ್ಸು ಆಧ್ಯಾತ್ಮದತ್ತ ವಾಲುತ್ತದೆ. 'ವಿಜಾಪೂರ ಹತ್ತಿರದ ನಿಂಬಾಳ ಗ್ರಾಮದಲ್ಲಿ ಆಧ್ಯಾತ್ಮ ಪೀಠ ಹಾಗೂ ಆಶ್ರಮವನ್ನು ಸ್ಥಾಪಿಸುತ್ತಾರೆ'[೭]. ಆ ಮೂಲಕ ಲೋಕಕಲ್ಯಾಣ ಕಾರ್ಯಗೈಯುತ್ತ ತತ್ವಜ್ಞಾನ ಮತ್ತು ಆಧ್ಯಾತ್ಮಿಕ ವಿಷಯದ ಮೇಲೆ ರಾಷ್ಟ್ರಮಟ್ಟದಲ್ಲಿ ಉಪನ್ಯಾಸವನ್ನು ನೀಡುತ್ತಾ ಹೆಸರುವಾಸಿಯಾಗಿರುತ್ತಾರೆ.

ರಾನಡೆಯವರಿಗೆ ೭೦ ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಅವರ ಭಕ್ತ ಸಮೂಹ ಹಾಗೂ ಶಿಷ್ಯಪರಂಪರೆ ಕೂಡಿಕೊಂಡು ಇವರ ಅಮೃತ ಮಹೋತ್ಸವನ್ನು ಅತಿ ಅದ್ದೂರಿಯಾಗಿ ಆಚರಿಸುತ್ತಾರೆ. ಇದಾದ ತರುವಾಯ ಹೆಚ್ಚು ಕಾಲ ಅವರು ಬದುಕುಳಿಯುವದಿಲ್ಲ. '೧೯೫೭ ರ ಜೂನ್ ೬ ರಂದು ಪರಮಾತ್ಮನಲ್ಲಿ ಅವರ ದೇಹ ಲೀನವಾಗುತ್ತದೆ'[೮].

ರಾನಡೆಯವರ ವ್ಯಕ್ತಿತ್ವವನ್ನು ಒಂದೇ ಮಾತಿನಲ್ಲಿ ಹೇಳುವುದಾದರೆ, ಆಧ್ಯಾತ್ಮದ ತಿರುಳನ್ನೇ ಮುಖ್ಯ ಉದ್ದೇಶವನ್ನಾಗಿ ಇಟ್ಟುಕೊಂಡು ನಿಷ್ಕಾಮ ಕರ್ಮಯೋಗಿಯಂತೆ ದುಡಿದಿರುತ್ತಾರೆ. ದೇವರ ಸಾಕ್ಷಾತ್ಕಾರಕ್ಕಾಗಿ ಬೀಜನಾಮ ಎಂಬ ಮಂತ್ರದ ಮೂಲಕ ದೇವರ ಅಸ್ತಿತ್ವವನ್ನು ಕಂಡುಕೊಂಡಿದ್ದಾರೆ. ಸನ್ಮಾರ್ಗದಲ್ಲಿ ನಡೆದು ಸಾರ್ಥಕತೆಯನ್ನು ಕಂಡು ಈ ಮಣ್ಣಿನಲ್ಲಿ ಬಾಳಿ ಹೋಗಿದ್ದಾರೆ.

ರಾನಡೆಯಂಥ ಅನರ್ಘ್ಯ ರತ್ನವು ಭಕ್ತಿ ಪರಂಪರೆ ಹಾಗೂ ಸಮಾಜ ಸುಧಾರಣೆಯಲ್ಲಿ ಕರ್ನಾಟಕದ ಪ್ರತಿನಿಧಿಯಾಗಿ ಆಧ್ಯಾತ್ಮದ ಕುರಿತಾಗಿ ಕಾರ್ಯಮಾಡಿದ ರೀತಿಯನ್ನು ನೋಡಿದರೆ ನಿಜಕ್ಕೂ ಅದ್ಭುತವೆನಿಸುತ್ತದೆ. ಆಧ್ಯಾತ್ಮದ ತೃಷೆ ಉಳ್ಳವರಿಗೆ ಅಂಥ ಒಬ್ಬ ಶ್ರೇಷ್ಠ ಸಂತರನ್ನು ಪರಿಚಯಿಸಿಕೊಡುವ ಕಾರ್ಯವನ್ನು ಎಂ. ಪಿ. ಪಾಟೀಲರು ಈ ಲೇಖನದ ಮೂಲಕ ಮಾಡಿರುತ್ತಾರೆ.

**ಶಾಂತಲಿಂಗ ಶಿವಯೋಗಿಗಳು :**

ಮಹಾರಾಷ್ಟ್ರದ ಶ್ರೇಷ್ಠ ಸಂತರಾದ ಶ್ರೀ ಶಾಂತಲಿಂಗ ಶಿವಯೋಗಿಗಳು ಬಸವಣ್ಣನವರ ವಿಚಾರಧಾರೆಗಳನ್ನು ಮೆಚ್ಚಿಕೊಂಡಿರುತ್ತಾರೆ. ಅವುಗಳನ್ನು ತಮ್ಮ ಪ್ರದೇಶದ ತುಂಬೆಲ್ಲಾ ಪ್ರಚಾರ ಗೊಳಿಸಿರುತ್ತಾರೆ. ಇಂತಹ ಮಹನೀಯರನ್ನು ಕರ್ನಾಟಕದ ಜನತೆಗೆ ಪರಿಚಯಿಸುವ ಉದ್ದೇಶದಿಂದ ಎಂ. ಪಿ. ಪಾಟೀಲರು ಈ ಲೇಖನವನ್ನು ರಚಿಸಿರುತ್ತಾರೆ.

೧೬ ನೇ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ಬಾಳಿ ಬದುಕಿದ ಶಾಂತಲಿಂಗ ಶಿವಯೋಗಿಗಳು ಬಸವಣ್ಣನವರ ಆದರ್ಶಗಳನ್ನು ಮೆಚ್ಚಿ ಅವರ ವಿಚಾರಗಳಿಂದ ಪ್ರೇರಿತರಾದ ಮಹಾಮಹಿಮ ಸಂತರಾಗಿದ್ದರು. 'ಮಹಾರಾಷ್ಟ್ರ ರಾಜ್ಯದ ಸಾತಾರಾ ಸಮೀಪವಿರುವ ಧರ್ಮಕ್ಷೇತ್ರವಾದ ಶಿಖರಸಿಂಗನಾಪುರವನ್ನು ತಮ್ಮ ಭಕ್ತಿ ನೆಲೆಯನ್ನಾಗಿ ಮಾಡಿಕೊಂಡು ವೀರಶೈವ ಧರ್ಮದ ಶ್ರೇಷ್ಠತೆಯನ್ನು', ಬಸವಣ್ಣನವರ ವಿಚಾರಗಳನ್ನು ಆ ಭಾಗದ ತುಂಬೆಲ್ಲಾ ಪ್ರಚಾರ ಮಾಡಿದ್ದಾರೆ. ಹಲವು ಶಿಷ್ಯ ಪರಂಪರೆಯನ್ನು ಹೊಂದಿ ಆ ಭಾಗದ ತುಂಬೆಲ್ಲಾ ಮಠಗಳನ್ನು ನಿರ್ಮಿಸಿರುತ್ತಾರೆ. ವೀರಶೈವ ಧರ್ಮದ ಕುರಿತಾಗಿ ಪ್ರಚಾರ ಕಾರ್ಯ ಕೈಗೊಂಡಿದ್ದಾರೆ. ಇತರೇ ಧರ್ಮಿಯರಿಗೆ ವೀರಶೈವ ಧರ್ಮದ ಮಹತ್ವನ್ನು ತಿಳಿಸಿ ಹೇಳುತ್ತ ಆ ಭಾಗದ ಶ್ರೇಷ್ಠ ಸಂತರೆಂದು ಕೀರ್ತಿ ಪಡೆದಿದ್ದಾರೆ. ವೀರಶೈವ ಧರ್ಮದ ಬಗೆಗೆ ಕಾಳಜಿ ಇರುವ ಇಂಥ ವ್ಯಕ್ತಿಗಳನ್ನು ಈ ಲೇಖನದ ಮೂಲಕ ಎಂ. ಪಿ. ಪಾಟೀಲರು ಪರಿಚಯಿಸಿದ್ದಾರೆ.

**ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು :**

ಭಕ್ತಿ, ಆಧ್ಯಾತ್ಮದ ತವರೂರೆಂದು ಪ್ರಸಿದ್ಧಿ ಪಡೆದಿರುವ ಕರ್ನಾಟದಲ್ಲಿ ಅನೇಕ ಸಾಧು ಸಂತರು ಬಾಳಿ ಹೋಗಿದ್ದಾರೆ. ಅವರು ತಮ್ಮ ಜೀವನದುದ್ದಕ್ಕೂ ಸಮಾಜಕ್ಕಾಗಿ ತಮ್ಮಿಂದಾದ ಅಳಿಲು ಸೇವೆಯನ್ನು ಮಾಡಿದ್ದಾರೆ. ಅಂತವರ ಸಾಲಿನಲ್ಲಿ ಸೇರುವ ಪ್ರಮುಖರೆಂದರೆ ಧಾರವಾಡದ ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು. ಈ ಮಹನೀಯರು ಮಾಡಿರುವ ಮಹತ್ಕಾರ್ಯವನ್ನು ಜನಮಾನಸದಲ್ಲಿ ಚಿರಸ್ಥಾಯಿಯಾಗಿ ಉಳಿಯುವಂತೆ ಮಾಡುವ ಉದ್ದೇಶದಿಂದ ಎಂ. ಪಿ. ಪಾಟೀಲರು ಸ್ವಾಮೀಜಿಯವರು ಲಿಂಗೈಕರಾದ ಮೂರನೆಯ ಪುಣ್ಯತಿಥಿಯ ನಿಮಿತ್ತ ಅವರನ್ನು ಸ್ಮರಿಸುವ ಕಾರ್ಯವನ್ನು ಈ ಲೇಖನದ ಮೂಲಕ ಮಾಡಿದ್ದಾರೆ.

'ಶ್ರೀ ಮೃತ್ಯುಂಜಯ ಮಹಾಸ್ವಾಮಿಗಳು ಧಾರವಾಡ ಜಿಲ್ಲೆಯ ಇಂಗಳ ಹಳ್ಳಿಯಲ್ಲಿ, ೯ ಎಪ್ರೀಲ್, ೧೯೮೮ ರಂದು ಕಾಂತಪ್ಪಯ್ಯ, ತಾಯಿ ಚೆನ್ನವೀರಮ್ಮ

ದಂಪತಿಗಳ ಉದರದಲ್ಲಿ ಜನಿಸಿದರು[೧೦]. ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸ್ವ-ಗ್ರಾಮ ಇಂಗಳ ಹಳ್ಳಿಯಲ್ಲಿ ಪೂರೈಸಿದರು. ಹಿರಿಯರ ಜ್ಞಾನಿಗಳ ಒತ್ತಾಸೆಯ ಮೇರೆಗೆ ತಂದೆ-ತಾಯಿಗಳು ಇವರನ್ನು ಮಠಕ್ಕೆ ಅರ್ಪಿಸುತ್ತಾರೆ. ಹಲವು ಗುರುಗಳ ಮಾರ್ಗದರ್ಶನದಿಂದ ಒಳ್ಳೆಯ ಜ್ಞಾನಿಯಾಗುತ್ತಾರೆ. ೧೯೦೬ ರಲ್ಲಿ ದಾವಣಗೆರೆಯ ಪೀಠಾಧಿಕಾರಿಗಳೆಂದು ಅಧಿಕಾರ ವಹಿಸಿಕೊಳ್ಳುತ್ತಾರೆ. ದಾವಣಗೆರೆಯ ಮಠದಲ್ಲಿದ್ದಾಗ ಬಸವ ಜಯಂತಿಯ ಆಚರಣೆಗೆ ಚಾಲನೆ ನೀಡಿದ್ದು ಇವರ ಮಹತ್ವದ ಕಾರ್ಯಗಳಲ್ಲಿ ಒಂದಾಗಿದೆ.

ಧಾರವಾಡದ ಭಕ್ತರ ಪ್ರೀತಿ ಒತ್ತಾಸೆಯ ಮೇರೆಗೆ ೧೯೧೬ ರಲ್ಲಿ ಧಾರವಾಡಕ್ಕೆ ಬಂದು ಮುರುಘಾಮಠದ ಪೀಠಾಧಿಪತಿಗಳೆಂದು ಅಧಿಕಾರ ವಹಿಸಿಕೊಳ್ಳುತ್ತಾರೆ. ಅಧಿಕಾರವಹಿಸಿಕೊಂಡ ಪೂಜ್ಯರು ಬಡ ಮಕ್ಕಳ ಶಿಕ್ಷಣಕ್ಕಾಗಿ ಮಠದ ಆವರಣದಲ್ಲಿ ಪ್ರಸಾದ ನಿಲಯವನ್ನು ಸ್ಥಾಪಿಸುತ್ತಾರೆ. ೧೯೪೦ ರಲ್ಲಿ ಶಿವಾನುಭವ ಎಂಬ ಸಂಸ್ಥೆಯನ್ನು ಸ್ಥಾಪಿಸುತ್ತಾರೆ. ಇದರ ಮೂಲಕ ಅಖಿಲ ಭಾರತೀಯ ಮಟ್ಟದಲ್ಲಿ ಧಾರ್ಮಿಕ ಸಮ್ಮೇಳನಗಳನ್ನು ಆಯೋಜಿಸುತ್ತಾರೆ. ಜನರಿಗೆ ಧರ್ಮದ ಕುರಿತು ಜಾಗೃತಿಯನ್ನುಂಟು ಮಾಡುತ್ತಾರೆ. ಇದೇ ಸಂಸ್ಥೆಯ ಅಡಿಯಲ್ಲಿ 'ಧಾರ್ಮಿಕ ಪ್ರಚಾರವನ್ನು ಸತತವಾಗಿ ಮಾಡುವವರ ದೃಷ್ಟಿಯಿಂದ ಸನ್ ೧೯೪೨ ರಲ್ಲಿ 'ಸಾವಧಾನ'[೧೧] ಎಂಬ ಪತ್ರಿಕೆಯನ್ನು ಪ್ರಕಟಿಸಿ ಹೊರತರುತ್ತಾರೆ. ಮಕ್ಕಳು ತಮ್ಮ ಮುಂದಿನ ಜೀವನದಲ್ಲಿ ಸದುವಿನಯ, ಸದಾಚಾರ, ಸತಚಾರಿತ್ರ್ಯವಂತರಾಗಿ ಬೆಳೆಯಬೇಕೆಂಬ ಉದ್ದೇಶದಿಂದ ಮಠದಲ್ಲಿರುವ ವಿದ್ಯಾರ್ಥಿಗಳಿಗೆ ಧಾರ್ಮಿಕ ಶಿಕ್ಷಣದ ವ್ಯವಸ್ಥೆಯನ್ನು ಕಲ್ಪಿಸಿಕೊಟ್ಟ ಕೀರ್ತಿ ಪೂಜ್ಯರಿಗೆ ಸಲ್ಲುತ್ತದೆ.

ಶರಣರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ತಮ್ಮ ಜೀವಿತದ ಉದ್ದಕ್ಕೂ ಸಾಗಿ ಹಲವಾರು ಸಂಘ ಸಂಸ್ಥೆಗಳನ್ನು ಕಟ್ಟಿ ಬೆಳೆಸಿದ್ದಾರೆ. ತಾವು ಅಧಿಕಾರವನ್ನು ಅನುಭವಿಸಿದೆ ಇತರೇ ಸಮಾಜ ಸೇವಕರಿಗೆ ಅವಕಾಶ ನೀಡಿದ್ದಾರೆ. ಆ ಎಲ್ಲಾ ಕಾರ್ಯಗಳಿಗೆ ರಕ್ಷಕನಂತೆ ನಿಂತು ಆಶೀರ್ವಾದ ಮಾಡಿದ್ದಾರೆ. ಬಡವರ ಕಲ್ಯಾಣಕ್ಕಾಗಿ ವಿದ್ಯಾರ್ಥಿಗಳ ಶೈಕ್ಷಣಿಕ ಅಭ್ಯುದಯಕ್ಕಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟ ಪುಣ್ಯ ಪುರುಷರ ಸಾಲಿಗೆ ಮೃತ್ಯುಂಜಯ ಸ್ವಾಮಿಗಳು ಸೇರಿದ್ದಾರೆ. ಇಂತಹ ಪೂಜ್ಯರ ತತ್ವಗಳನ್ನು, ಸಿದ್ಧಾಂತಗಳನ್ನು, ಕಾಯಕ ನಿಷ್ಠೆಯನ್ನು ಮುಂದಿನ ಜನಾಂಗಕ್ಕೆ ತಿಳಿಯಪಡಿಸುವ ಉದ್ದೇಶದಿಂದ ಎಂ. ಪಿ. ಪಾಟೀಲರು ಈ ಲೇಖನವನ್ನು ರಚಿಸಿ ಪೂಜ್ಯರಿಗೆ ಗೌರವನ್ನು ಸಲ್ಲಿಸಿದ್ದಾರೆ.

ಎಂ. ಪಿ. ಪಾಟೀಲರ ಈ ಎಲ್ಲಾ ಲೇಖನಗಳ ಹಿಂದಿನ ಉದ್ದೇಶ ಸಮಾಜಕ್ಕಾಗಿ ದುಡಿದಂತಹ ಮಹಾತ್ಮರನ್ನು ಸ್ಮರಿಸಿ ಅವರ ವಿಚಾರಗಳನ್ನು

ಪ್ರಚಾರಗೊಳಿಸುವದಾಗಿದೆ. ಸಾಹಿತ್ಯವನ್ನು ಕೇವಲ ಕಾವ್ಯ, ಕಥೆ, ನಾಟಕ, ಕಾದಂಬರಿ ಎಂದು ಒಂದು ಮಗ್ಗುಲಲ್ಲಿ ಅರ್ಥೈಯಿಸದೆ ಭಕ್ತಿ ಪರಂಪರೆ, ಸಮಾಜ ಸುಧಾರಣೆ, ವೈಚಾರಿಕ ನಿಲುವು ಎಂಬ ಇನ್ನೊಂದು ಮಗ್ಗುಲಲ್ಲಿ ಅರ್ಥೈಯಿಸಬೇಕೆಂದು ಈ ಲೇಖನಗಳ ಮೂಲಕ ಕರೆಕೊಟ್ಟಿದ್ದಾರೆ. ಈ ಎಲ್ಲ ಅಂಶಗಳು ಮನುಷ್ಯನ ಮನಸ್ಸು ಹಾಗು ಬದುಕಿಗೆ ಹೇಗೆ ಸಹಾಯಕಾರಿಯಾಗಿರುತ್ತವೆ ಎಂಬುದನ್ನು ಈ ಲೇಖನಗಳಲ್ಲಿ ಎಂ. ಪಿ. ಪಾಟೀಲರು ಹೇಳಿದ್ದಾರೆ.

**೩.೨ ನಾಟಕ ಭಕ್ತಿ ಭಂಡಾರಿ ಬಸವಣ್ಣ :**

ಭರತ ಖಂಡದ ಇತಿಹಾಸ ಪುಟಗಳನ್ನು ಎಳೆ-ಎಳೆಯಾಗಿ ಬಿಚ್ಚಿಡುತ್ತ ಹೋದರೆ ವೇದಗಳ ಕಾಲದಿಂದ ಇಲ್ಲಿಯವರೆಗೆ ಒಂದಿಲ್ಲೊಂದು ಪವಾಡಗಳು ಘಟಿಸುತ್ತಲೆ ಬಂದಿರುತ್ತವೆ. ಇವುಗಳ ಮುಖ್ಯ ಉದ್ದೇಶ, ಸಮಾಜದ ಪರಿವರ್ತನೆ ಆಗಿರುತ್ತದೆ. ಇಂತ ಕಾರ್ಯಕ್ಕಾಗಿ ಹಲವಾರು ಪುಣ್ಯ ಪುರುಷರು ದೇವ ಮಾನವರಾಗಿ ಪವಾಡ ಪುರುಸಷರೆಂದು ಈ ಪುಣ್ಯ ಭೂಮಿಯಲ್ಲಿ ಜನ್ಮ ತಾಳಿರುತ್ತಾರೆ. ಇಂತಹ ಆಧ್ಯಾತ್ಮದ ಹಿನ್ನೆಲೆಯನ್ನು ಹೊಂದಿದ ಸಿದ್ಧ ಸಾಧಕರ ಇತಿಹಾಸದ ಘಟನೆಗಳನ್ನು ಇಂದಿನ ಓದುಗರಿಗೆ ತುಲುಪಿಸುವ ಉದ್ದೇಶದಿಂದ ಎಂ. ಪಿ. ಪಾಟೀಲರು ಬಸವಣ್ಣನವರ ಜೀವನ ಚರಿತ್ರೆಯನ್ನು ಉದಾಹರಣೆಯಾಗಿ ಇಟ್ಟುಕೊಂಡು ಈ ನಾಟಕವನ್ನು ರಚಿಸಿದ್ದಾರೆ. ಬಸವಣ್ಣವರ ಬಿತ್ತಿದ ಮಾನವತ್ವದ ಸಂದೇಶಗಳನ್ನು ಜನರ ಮನಸ್ಸಿನಲ್ಲಿ ಅಜರಾಮರವಾಗಿ ಉಳಿಸಬೇಕೆಂಬ ಮಹದೋದ್ದೇಶದಿಂದ ಎಂ. ಪಿ. ಪಾಟೀಲರು ಈ ಕಾರ್ಯ ಮಾಡಿದ್ದಾರೆ. ಈ ನಾಟಕದ ಪ್ರಮುಖ ಪಾತ್ರಧಾರಿ ಬಸವಣ್ಣನವರು. ಇವರು ಭೂಮಿಯ ಮೇಲೆ ಯಾವ ಕಾರ್ಯಕ್ಕಾಗಿ ಜನ್ಮತಳೆಯುತ್ತಾರೆ ಎಂಬುದು ನಾಟಕದ ವಿಷಯವಸ್ತುವಾಗಿದೆ.

ಭಕ್ತಿ ಭಂಡಾರಿ ಬಸವಣ್ಣನವರ ನಾಟಕದಲ್ಲಿ ಏಳು ದೃಶ್ಯಗಳಿವೆ. ಕೈಲಾಸದಲ್ಲಿ ಶಿವಗಣಂಗಳು ಹಾಗೂ ನಾರದ ಮುನಿಗಳ ಮುಖ್ಯ ಸಭೆಯೊಂದಿಗೆ ಮೊದಲನೇ ದೃಶ್ಯ ಆರಂಭವಾಗುತ್ತದೆ. ಭೂಲೋಕದಲ್ಲಿರುವಂತಹ ಈಶಭಕ್ತಿಯ ಲೋಪವನ್ನು ಹೇಗೆ ಸರಿಪಡಿಸುವುದೆಂದು ಈ ಸಭೆಯಲ್ಲಿ ಚರ್ಚಿಸುತ್ತಾರೆ. ಈ ಮಹತ್ವದ ಕಾರ್ಯಕ್ಕೆ ನಂದೀಶನೆ ಸೂಕ್ತ ವ್ಯಕ್ತಿಯೆಂದು ನಿರ್ಧರಿಸುತ್ತಾರೆ. ಅದರಂತೆ ನಂದೀಶನು ಬಸವಣ್ಣನ ರೂಪದಲ್ಲಿ ಅವತಾರವೆತ್ತಿ ಬಾಗೇವಾಡಿಯ ಶರಣ ದಂಪತಿಗಳಾದ ಮಾದರಸ ಮತ್ತು ಮಾದಲಾಂಬಿಕೆಯರ ಉದರದಲ್ಲಿ ಜನಿಸುತ್ತಾರೆ. ಮನೆಯವರೆಲ್ಲರೂ ಈ ಮಗುವಿಗೆ ಬಸವಣ್ಣ ಎಂದು ನಾಮಕರಣ ಮಾಡುತ್ತಾರೆ. ಬಾಲಕ ಬಸವಣ್ಣ ಬೆಳೆದು ದೊಡ್ಡವನಾಗಿ ಬ್ರಾಹ್ಮಣ ಸಮುದಾಯದಲ್ಲಿ ನಡೆಯುವ ಉಪನಯನ ಎಂಬ

ಧಾರ್ಮಿಕ ಕಾರ್ಯದ ಕಟ್ಟಳೆಗಳನ್ನು ಕಿತ್ತೊಗೆದು ಮಡಿವಂತ, ಜಾತಿ ನಾಯಕರಿಂದ ಅವಮಾನಕ್ಕೆ ಈಡಾಗುತ್ತಾರೆ. ಮನೆ ಬಿಟ್ಟು ಕೂಡಲ ಸಂಗಮಕ್ಕೆ ಬರುತ್ತಾರೆ. ಅಲ್ಲಿ ಜಾತ ವೇದ ಮುನಿಗಳಿಂದ ದೀಕ್ಷೆ ಪಡೆದು ಲಿಂಗ ಆರಾಧನೆಯನ್ನು ಕೈಕೊಂಡು ಕೂಡಲ ಸಂಗಮನ ಸನ್ನಿಧಿಯಲ್ಲಿ ಬೆಳೆಯುತ್ತಾರೆ. ಭಗವತ್ ಗೀತೆಯನ್ನು ಆಳವಾಗಿ ಅಭ್ಯಸಿಸಿ ಅದರಲ್ಲಿಯ ಸಂಸ್ಕೃತದ ಶ್ಲೋಕಗಳನ್ನು ವರ್ಣನಾತ್ಮಕವಾಗಿ ವಿವರಿಸುತ್ತಾರೆ. ವಚನ ಎಂಬ ನಿಜನಾಮದೊಂದಿಗೆ ಅವುಗಳ ಸಾರವನ್ನು ಹೇಳುತ್ತಾ ಶರಣರನ್ನು ಮತ್ತು ಮನುಷ್ಯ ಸಂಕುಲನವನ್ನು ಮುಕ್ತಿಯ ಮಾರ್ಗದ ಕಡೆಗೆ ಒಯ್ಯುವ ಕಾರ್ಯಕ್ಕೆ ಸಿದ್ಧರಾಗುತ್ತಾರೆ. 'ಜ್ಞಾನವೇ ಮುಕ್ತಿ ಮಂದಿರಕ್ಕೆ ದಾರಿ ಮುಕ್ತಿಯೇ ಮಾನವನ ಅಂತಿಮ ಗುರಿ'[೨೨]. ಎಂದು ಜಾತವೇದ ಮುನಿಗಳ ಸಿದ್ಧಾಂತಕ್ಕೆ ತಲೆಬಾಗಿ ಕೂಡಲಸಂಗಮದಲ್ಲಿ ತಮ್ಮ ಆಧ್ಯಾತ್ಮಿಕ ನೆಲೆಯನ್ನು ಕಂಡು ಕೊಳ್ಳುತ್ತಾರೆ. ಹೀಗೆ ಕಾರ್ಯ ಮಾಡುತ್ತಿರುವ ಸಂದರ್ಭದಲ್ಲಿ ಕೂಡಲ ಸಂಗಮನಿಂದ ಆಕಾಶವಾಣಿಯಾಗುತ್ತದೆ. 'ಬಸವಣ್ಣ ನೀನು ಇಲ್ಲಿ ನೆಲೆಸುವದರ ಬದಲಾಗಿ ಕಲ್ಯಾಣಕ್ಕೆ ಹೋಗು ಅಲ್ಲಿ ಜನರನ್ನು ಮುಕ್ತಿಯ ಮಾರ್ಗದೆಡೆಗೆ ಒಯ್ಯು'. ಎಂಬ ಕೂಡಲ ಸಂಗಮನ ವಾಣಿಗೆ ತಲೆಬಾಗುತ್ತಾರೆ. ಅಕ್ಕ ನಾಗಮ್ಮ ಮತ್ತು ಜಾತವೇದ ಮುನಿಗಳ ಸಲಹೆ ಮೇರೆಗೆ ಬಲದೇವನ ಮಗಳಾದ ಗಂಗಾಂಬಿಕೆಯನ್ನು ವಿವಾಹವಾಗಲು ನಿಶ್ಚಯಿಸಿ ಕಲ್ಯಾಣಕ್ಕೆ ಹೊರಡಲು ಸಿದ್ಧರಾಗುತ್ತಾರೆ. ಈ ದೃಶ್ಯದೊಂದಿಗೆ ನಾಟಕ ಮುಕ್ತಾಯಗೊಳ್ಳುತ್ತದೆ.

ಈ ನಾಟಕವು ಇತ್ತೀಚಿನ ವಿದ್ವಾಂಸರಿಗೆ ಮತ್ತು ಸಂಶೋಧಕರಿಗೆ ಬಸವಣ್ಣನವರ ಕುರಿತು ತಾತ್ವಿಕವಾಗಿ ತಿಳಿದುಕೊಂಡು ಅಧ್ಯಯನ ಮಾಡಲು ಸಹಾಯಕಾರಿಯಾಗಿರುತ್ತದೆ. ಎಂ. ಪಿ. ಪಾಟಿಲರು ಬಸವಣ್ಣವರ ಒಟ್ಟು ಜೀವನ ಚರಿತ್ರೆಯನ್ನು ಅಭ್ಯಸಿಸಿಕೊಂಡು ಈ ನಾಟಕವನ್ನು ರಚಿಸಿದ್ದಾರೆ. ಬಸವಣ್ಣವರ ಹುಟ್ಟು, ಲೌಕಿಕ ಜೀವನಕ್ಕೆ ಸಂಬಂಧಪಟ್ಟ ವಿಚಾರಗಳನ್ನು ಈ ನಾಟಕದಲ್ಲಿ ಮುಕ್ತವಾಗಿ ಚರ್ಚಿಸಿದ್ದಾರೆ. ಈ ನಾಟಕ, ಬಸವಣ್ಣವರ ಜೀವನವನ್ನು ಆಳವಾಗಿ ಅಭ್ಯಸಿಸಿದ ವಿದ್ವಾಂಸರಿಂದಲೇ ವಿಮರ್ಶೆ ಮಾಡಲಾಗದಷ್ಟು ಉತ್ಕೃಷ್ಟವಾದ ವಿಚಾರ ಶೈಲಿಯಿಂದ ಕೂಡಿದ್ದಾಗಿದೆ.

**೩.೩ ಸಣ್ಣಕಥೆ– ಬಸವಣ್ಣ ನನ್ನ ಮಗನಿಗೆ ಬುದ್ಧಿ ಕೊಡಪ್ಪಾ :**

೧೨ ನೇ ಶತಮಾನದಲ್ಲಿ ಜಾತಿ ವ್ಯವಸ್ಥೆಯ ವಿರುದ್ಧ ಧ್ವನಿ ಎತ್ತಿದ ಬಸವಣ್ಣನವರ, ಈ ನಾಡಿನಲ್ಲಿ ೧೯ನೇ ಶತಮಾನದ ಯುಗದಲ್ಲಿಯೂ ಜಾತಿ ವ್ಯವಸ್ಥೆ ಇನ್ನೂ ಜೀವಂತವಾಗಿರುದನ್ನು ಮನಗಂಡು ಎಂ. ಪಿ. ಪಾಟೀಲರು

'ಬಸವಣ್ಣಾ ನನ್ನ ಮಗನಿಗೆ ಬುದ್ಧಿ ಕೊಡಪ್ಪಾ' ಎನ್ನುವ ಕಲ್ಪಿತ ಸಣ್ಣಕತೆಯನ್ನು ರಚಿಸಿದ್ದಾರೆ.

ಈ ಕಥೆಯಲ್ಲಿ ಮೂರು ಪಾತ್ರಗಳಿರುತ್ತವೆ. ಕಥೆಯ ನಿರೂಪಕರು ಸ್ವತಃ ಲೇಖಕರೆ ಆಗಿರುತ್ತಾರೆ. ಇನ್ನೊಂದು ಪಾತ್ರದಲ್ಲಿ ಭೀಮ ಎಂಬ ವ್ಯಕ್ತಿ ಇದ್ದು ಈ ಪಾತ್ರ ಅಸ್ಪೃಶ್ಯ ವರ್ಗವನ್ನು ಪ್ರತಿನಿಧಿಸುತ್ತದೆ. ಚೆನ್ನಯ್ಯ ಎಂಬ ಇನ್ನೊಂದು ಪಾತ್ರ ಮೇಲ್ವರ್ಗದ ಆಚರಣೆಯನ್ನು ಮತ್ತು ಡಾಂಭಿಕ ಭಕ್ತಿಯನ್ನು ಸಂಕೇತಿಸುವ ಪ್ರತಿನಿಧಿಯಾಗಿ ನಿಲ್ಲುತ್ತದೆ. ಕಥೆ ಭೀಮನು ನಿರೂಪಕರ ಮನೆಗೆ ಆಗಮಿಸುವದರೊಂದಿಗೆ ಆರಂಭವಾಗುತ್ತದೆ.

ತಂದೆಗೆ ಬಂದಿರುವ ಕಾಯಿಲೆಯನ್ನು ಹೋಗಲಾಡಿಸಲು ಭೀಮನು ನಿರೂಪಕರ ಮನೆಗೆ ಗುಳಿಗೆಯನ್ನು ತರಲು ಬರುತ್ತಾನೆ. ಅಲ್ಲಿಗೆ ಬಂದ ಭೀಮನಿಗೆ ಸಿಕ್ಕ ಮರ್ಯಾದೆಯನ್ನು ಕಥೆ ಚಿತ್ರಿಸುತ್ತ ಹೋಗುತ್ತದೆ. ಮನೆಯಲ್ಲಿ ಭೀಮನ ಪ್ರವೇಶದಿಂದಾಗಿ ತಾಯಿಗೂ ನಿರೂಪಕರಿಗೂ ವಾಗ್ವಾದ ನಡೆಯುತ್ತದೆ. ತತ್ವಗಳು ಸಿದ್ಧಾಂತಗಳು, ಮೌಲ್ಯಗಳು, ಶ್ರೇಷ್ಠ ಎಂದು ನಿರೂಪಕರು ವಾದಿಸುತ್ತಾರೆ. ಸಂಪ್ರದಾಯ ಆಚರಣೆಗಳು ಶ್ರೇಷ್ಠ ಎಂದು ತಾಯಿ ವಾದಿಸುತ್ತಾಳೆ. ಇವರ ಮಾತಿನ ನಡುವೆ ಚೆನ್ನಯ್ಯನ ಪ್ರವೇಶವಾಗುತ್ತದೆ. ಚೆನ್ನಯನ ವ್ಯಕ್ತಿತ್ವ – "ಮಾಡುವದೆಲ್ಲಾ ಅನಾಚಾರ, ಮನೆಮುಂದೆ ಬೃಂದಾವನ" ಎಂಬ ಹಿನ್ನಲೆಯುಳ್ಳವನು. ಇಂತಹ ವ್ಯಕ್ತಿಗಳ ಪಾದವನ್ನು ಪೂಜಿಸಿ ಆ ನೀರನ್ನು ತೀರ್ಥವೆಂದು ಸೇವಿಸುವುದಕ್ಕಿಂತ ಭೀಮನಂತಹ ಸಾತ್ವಿಕ ವ್ಯಕ್ತಿಯನ್ನು ಒಳಕರೆದು ಉಪಚರಿಸುವುದು ಎಲ್ಲಕ್ಕಿಂತಲೂ ಮೀಗಿಲಾದದ್ದು ಎಂದು ನಿರೂಪಕರು ತಾಯಿಯವರಿಗೆ ಹೇಳುತ್ತಾರೆ. ಇದೆ ಸಂದರ್ಭದಲ್ಲಿ ಬಸವ ಜಯಂತಿಯ ಮೆರವಣಿಗೆಯು ನಿರೂಪಕರ ಮನೆಯ ಮುಂದೆ ಬರುತ್ತದೆ. ನಿರೂಪಕರು ಸ್ವಗತದಲ್ಲಿ ಬಸವಣ್ಣನಂತಹ ಪುಣ್ಯ ಪುರುಷರನ್ನು ಗುಡಿಯೊಳಗೆ ಆಡಂಬರದ ಸಂಪ್ರದಾಯಗಳ ಮದ್ಯೆ ಇಟ್ಟು ಪೂಜಿಸುವುದರ ಬದಲಾಗಿ ಸಚ್ಚಾರಿತ್ರ್ಯಯುಳ್ಳ ಪ್ರತಿಯೊಬ್ಬ ಮಾನವನ ಆತ್ಮದಲ್ಲಿಟ್ಟು ಪೂಜಿಸುವ ಕಾರ್ಯ ಆಗಬೇಕು ಎಂಬ ಸಂದೇಶದೊಂದಿಗೆ ಕಥೆ ಮುಕ್ತಾಯಗೊಳ್ಳುತ್ತದೆ. ಈ ಕಥೆಯ ಉದ್ದೇಶ ಬಸವಣ್ಣನವರ ವಿಚಾರಧಾರೆಗಳು ಪ್ರಸ್ತುತ ಯುಗದಲ್ಲಿಯೂ ಜೀವಂತವಾಗಿರುತ್ತವೆ. ಎಂಬುದನ್ನು ಜಾತಿ ಮೂಢರಿಗೆ ತಿಳಿಸಿ ಅವರಲ್ಲಿ ಅರಿವು ಮೂಡಿಸುವದು ಈ ಕಥೆಯ ಉದ್ದೇಶವಾಗಿದೆ.

ಎಂ. ಪಿ. ಪಾಟೀಲರು ಕೂಡ ತಮ್ಮ ಜೀವನದಲ್ಲಿ ನಡೆದುಕೊಂಡಿದ್ದು ಹೀಗೆಯೇ. ತಮ್ಮ ಜೀವಿತಾವಧಿಯ ಕೊನೆಯವರೆಗೂ ಗಾಂಧೀಜಿ–ಬಸವಣ್ಣನವರ ಆಶಯದಂತೆ ದಲಿತರ ಹೋರಾಟಕ್ಕಾಗಿ ತಮ್ಮ ಸರ್ವಸ್ವವನ್ನು ಮುಡಿಪಾಗಿಟ್ಟಿದ್ದಾರೆ.

ಸಮಾಜ ಸೇವೆ, ಸಹಕಾರಿ ರಂಗದ ಮೂಲಕ ದಲಿತರನ್ನು ಸಮಾಜದ ಮುಖ್ಯವಾಹಿನಿಗೆ ತರುವಲ್ಲಿ ಇವರ ಕಾರ್ಯ ಸಾರ್ಥಕವಾಗಿದೆ. ಮಾನವ ಧರ್ಮವನ್ನು ಪ್ರೀತಿಸುವ ಪ್ರತಿನಿಧಿಯಾಗಿ ಶರಣರು ಹಾಕಿಕೊಟ್ಟ ಮಾರ್ಗದಲ್ಲಿ ನಡೆದಿರುತ್ತಾರೆ.

**೩.೪ ಆತ್ಮ ಚರಿತ್ರೆ :**

**ನನ್ನ ಜೀವನ ಚರಿತ್ರೆ :**

ಎಂ. ಪಿ. ಪಾಟೀಲರು ತಮ್ಮ ಜೀವನದ ಕುರಿತಾದ ಆತ್ಮಚರಿತ್ರೆಯೊಂದನ್ನು ಬರೆದಿದ್ದಾರೆ. ಈ ಚರಿತ್ರೆಯಲ್ಲಿ ಅವರು ಜನ್ಮ ತಳೆದ ಸಂಕೇಶ್ವರದ ಪರಿಸರ, ಮನೆತನದ ಇತಿಹಾಸ, ಬಾಲ್ಯದ ಜೀವನದ ಕುರಿತಾದ ಪ್ರಮುಖ ಅಂಶಗಳನ್ನು ಚರ್ಚಿಸಿದ್ದಾರೆ. ಕನ್ನಡ ಪರಿಸರದಲ್ಲಿ ಬೆಳೆದು ಮಹಾರಾಷ್ಟ್ರದ ವಿವಿಧ ಪ್ರದೇಶಗಳಿಗೆ ಹೋಗಿ ಅಲ್ಲಿ ಮರಾಠಿ ಶಿಕ್ಷಣವನ್ನು ಪಡೆದ ಅನುಭವವನ್ನು ಇದರಲ್ಲಿ ಹೇಳಿದ್ದಾರೆ. ಬೊಂಬಾಯಿಯಲ್ಲಿ ಕಾನೂನು ಪದವಿಯನ್ನು ಪೂರೈಸಿ ವಕೀಲಿ ವೃತ್ತಿಯನ್ನು ಪ್ರಾರಂಭಿಸುವಾಗಿನ ಸಮಸ್ಯೆಗಳನ್ನು ವಿವರಿಸಿದ್ದಾರೆ. ಅಕಸ್ಮಾತಾಗಿ ಬಂದ ರಾಜಕೀಯ ಪ್ರವೇಶವು ಅವರ ಜೀವನವನ್ನು ಬದಲಿಸುತ್ತದೆ. ಎಂ. ಪಿ. ಪಾಟೀಲರು ರಾಜಕೀಯ ರಂಗದಲ್ಲಿ ಹಾಗೂ ಸಹಕಾರ ರಂಗದಲ್ಲಿ ಬೆಳಗವಣಿಗೆ ಹೊಂದಿದ ವಿವರಗಳನ್ನು ಈ ಆತ್ಮ ಕಥೆಯಲ್ಲಿ ಪಡಮೂಡಿಸಿದ್ದಾರೆ. ಸೈನಿಕ ವೃತ್ತಿಯ ಶಿಸ್ತು, ಆಚರಣೆಗಳ ಕುರಿತು ವಿವರವಾದ ಮಾಹಿತಿಯನ್ನು ನೀಡಿದ್ದಾರೆ. ಬಾಲ್ಯದಲ್ಲಿಯೇ ತಂದೆತಾಯಿಗಳನ್ನು ಕಳೆದುಕೊಂಡು ಕಿತ್ತು ತಿನ್ನುವ ಬಡತನದ ಮಧ್ಯೆಯೇ ಶಿಕ್ಷಣವನ್ನು ಪಡೆದುಕೊಂಡು ಸಮಾಜದಲ್ಲಿ ಉನ್ನತವಾದ ಹುದ್ದೆಗಳನ್ನು ಅಲಂಕರಿಸಿದ ಎಂ. ಪಿ. ಪಾಟೀಲರ ಜೀವನ ಇತರೆ ರಾಜಕಾರಣಿಗಳಿಗೆ ಮಾದರಿಯಾಗಿರುತ್ತದೆ.

ರಾಜಕೀಯ ಒತ್ತಡದ ಮಧ್ಯೆಯೂ ಬಿಡುವು ಮಾಡಿಕೊಂಡು ಇಂತಹ ಅಪರೂಪದ ಬರವಣಿಗೆಗಳನ್ನು ಕನ್ನಡದಲ್ಲಿ ರಚಿಸಿ ಪ್ರಥಮ ದರ್ಜೆಯ ಸಾಹಿತಿಗಳ ಸಾಲಿಗೆ ಸೇರ್ಪಡೆಯಾಗಿದ್ದಾರೆ.

**ಅಡಿಟಿಪ್ಪಣಿಗಳು :**

೧) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೬೫

೨) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೬೭

೩) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ.ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೬೯

೪) ಭಾರತದ ಸಂವಿಧಾನ, ಸಂಪಾದಕರು, ಎನ್. ಬಿ. ಪಾಟೀಲ, ಪು. ಸಂ. : ೨೬

೫) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೭೨

೬) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೭೭

೭) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೮೩

೮) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಜಿ. ಎಸ್. ಮರಿಗುದ್ದಿ. ಪು. ಸಂ. : ೮೭

೯) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೯೪

೧೦) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೦೧

೧೧) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೦೫

೧೨) ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು : ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೨೧

ಅಧ್ಯಾಯ ೪

## ಎಂ. ಪಿ. ಪಾಟೀಲರ ಸಂಶೋಧನೆಗಳು

ಎಂ. ಪಿ. ಪಾಟೀಲರು ಕೇವಲ ಸೃಜನಶೀಲ ಸಾಹಿತ್ಯಕ್ಕಷ್ಟೇ ತಮ್ಮನ್ನು ಸೀಮಿತಗೊಳಿಸಿಕೊಳ್ಳಲಿಲ್ಲ. ಸೃಜನೇತರ ಸಾಹಿತ್ಯದ ಪ್ರಮುಖ ಪ್ರಕಾರವಾದ ಸಂಶೋಧನೆಯನ್ನು ತಮ್ಮ ಅಧ್ಯಯನಕ್ಕೆ ಕ್ಷೇತ್ರವನ್ನಾಗಿ ಮಾಡಿಕೊಂಡರು. ಬಸವೇಶ್ವರ, ಪಾಶುಪಥ ಕಾಳಾಮುಖದ ನಿಜ ಸ್ವರೂಪ ಹಾಗೂ ದಕ್ಷ ಯಜ್ಞ ಸಂಹಾರದ, ಕುರಿತಾಗಿ ಮಹತ್ವದ ವಿಷಯಗಳನ್ನು ಆಳವಾಗಿ ಅಭ್ಯಸಿಸುತ್ತಾರೆ. ಹಿಂದಿನ ಸಂಶೋಧಕರು ಈ ಮೇಲಿನ ವಿಷಯಗಳ ಕುರಿತು ಹೇಳದೇ ಇರುವ ವಿಚಾರಗಳನ್ನು ತಮ್ಮ ಸಂಶೋಧನಾ ಕೃತಿಗಳಲ್ಲಿ ಚರ್ಚಿಸಿದ್ದಾರೆ.

ಎಂ. ಪಿ. ಪಾಟೀಲರು ತಮ್ಮ ಸಂಶೋಧನಾ ಕೃತಿಗಳಲ್ಲಿ ಪುರಾಣ ಕಾಲದ ಮೂರು ಮುಖ್ಯ ವಿಷಯಗಳನ್ನು ಆಯ್ದುಕೊಂಡಿದ್ದಾರೆ. ಅವುಗಳನ್ನು ಸೃಜನಶೀಲ ಸಾಹಿತ್ಯದಂತೆ ಸಾಮಾನ್ಯವಾಗಿ ಚರ್ಚಿಸದೆ ಆ ವಿಷಯಗಳ ಚೂಲ-ಮೂಲಗಳನ್ನು ಉದಾಹರಣೆ ಸಹಿತ ಹೇಳಿದ್ದಾರೆ. ಇದರ ಮೂಲಕ ಜನತೆಗೆ ನಿಜವಾದ ಸತ್ಯವನ್ನು ತಲುಪಿಸುವ ಕಾರ್ಯವನ್ನು ಮಾಡಿದ್ದಾರೆ. ಎಂ. ಪಿ. ಪಾಟೀಲರು ಈ ಸಂಶೋಧನಾ ಕೃತಿಗಳಲ್ಲಿ ತಾವು ತಿಳಿದುಕೊಂಡ ಎಲ್ಲ ವಿಚಾರಗಳನ್ನು ಮೂಲ ಸಂಪ್ರದಾಯಕ್ಕೆ ಎಲ್ಲಿಯೂ ಧಕ್ಕೆ ಬಾರದ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ.

ಎಂ. ಪಿ. ಪಾಟೀಲರು ರಚಿಸಿದ ಸಂಶೋಧನಾ ಕೃತಿಗಳು-

೧) ಬಸವೇಶ್ವರರಸ ಚರಿತ್ರೆಯ ಮೇಲೆ ಹೊಸ ಬೆಳಕು

೨) ಲಾಕುಳ ಶೈವ(ಲಕುಲೀಶ ಪಾಶುಪಥ) ಅಥವಾ ಕಾಳಾಮುಖ ಶೈವದ ನಿಜಸ್ವರೂಪ

೩) ವೀರಶೈವ ಧರ್ಮದ ಪ್ರವರ್ತಕ ವೀರಭದ್ರ ದೇವರು ದಕ್ಷಯಜ್ಞ ಸಂಹಾರಕ ವೀರಭದ್ರನಲ್ಲ.

### ೪.೧ ಬಸವೇಶ್ವರರ ಚರಿತ್ರೆಯ ಮೇಲೆ ಹೊಸ ಬೆಳಕು :

ಬಸವೇಶ್ವರ ಚರಿತ್ರೆಯ ಮೇಲೆ ಹೊಸ ಬೆಳಕು ಎಂಬ ಸಂಶೋಧನಾ ಕೃತಿಯಲ್ಲಿ ಒಟ್ಟು ಹನ್ನೆರಡು ಪ್ರಕರಣಗಳಿರುತ್ತವೆ. ಬಸವಣ್ಣವರ ಜೀವನ ಚರಿತ್ರೆಯ ಮೇಲೆ ಬೆಳಕು ಚೆಲ್ಲುವ ಕಾರ್ಯವನ್ನು ಎಂ. ಪಿ. ಪಾಟೀಲರು ಈ ಕೃತಿಯ ಮೂಲಕ ಮಾಡಿದ್ದಾರೆ.

ಇಂದಿನ ಸಮಾಜಕ್ಕೆ ಬಸವಣ್ಣನವರ ಕುರಿತಾದ ಅಧಿಕೃತ ಚರಿತ್ರೆಯು ಎಷ್ಟು ಅವಶ್ಯಕವಾಗಿದೆ ಎಂಬ ವಿಷಯದೊಂದಿಗೆ ಮೊದಲನೆಯ ಪ್ರಕರಣವು ಆರಂಭವಾಗುತ್ತದೆ. ೧೨ನೇ ಶತಮಾನದಲ್ಲಿ ಜನತೆಗೆ ಧರ್ಮ, ಐಕ್ಯತೆ, ಸಮಾನತೆ ಮುಂತಾದ ವಿಚಾರಗಳನ್ನು ತಿಳಿಸುತ್ತಾ ಸಮಾಜದ ಏಳ್ಗೆಯನ್ನು ವಿಕಾಸಗೊಳಿಸುವ ಅದಮ್ಯ ಶಕ್ತಿಯೊಂದಿಗೆ ಬಸವಣ್ಣನೆಂಬ ಮಹಾಶಕ್ತಿಯ ಪ್ರವೇಶವಾಗುತ್ತದೆ. ಆ ಸಂದರ್ಭದಲ್ಲಿ ಬಸವಣ್ಣನವರ ವಿಚಾರಗಳನ್ನು ಕೆಲವರು ಅಪ್ಪಿಕೊಂಡರೆ ಇನ್ನು ಕೆಲವು ಡಂಭಾಚಾರಿಗಳು ದ್ವೇಷಿಸುತ್ತಾರೆ. ಬಸವಣ್ಣನವರನ್ನು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿ ಅವರ ವ್ಯಕ್ತಿತ್ವಕ್ಕೆ ಕಳಂಕ ತರುವ ಚಟುವಟಿಕೆಗಳು ಆ ಕಾಲದಲ್ಲಿ ನಡೆಯುತ್ತವೆ. ಸಂಪ್ರದಾಯ ಆಚರಣೆಗಳನ್ನು ಅತಿಯಾಗಿ ಅಪ್ಪಿಕೊಳ್ಳುವ ಜನರು ಬಸವಣ್ಣನ ಜೀವನ ಚರಿತ್ರೆಯ ದಿಕ್ಕನ್ನು ಬದಲಾಯಿಸಿ ಅವರನ್ನು ಸಮಾಜದ ಖಳನಾಯಕರೆಂದು ಬಿಂಬಿಸಿರುತ್ತಾರೆ. ಈ ವಿಷಯವನ್ನೇ ಇಂದಿನ ಸಂಶೋಧಕರು ಸಮಾಜಕ್ಕೆ ಸತ್ಯವೆಂದು ತಿಳಿಸಿರುತ್ತಾರೆ. ಇಲ್ಲಿ ಕನ್ನಡಕ್ಕಿಂತ ಕನ್ನಡೇತರ ವಿದ್ವಾಂಸರು ಬಸವಣ್ಣನವರ ಕುರಿತಾಗಿ ತಪ್ಪಾಗಿ ಅರ್ಥೈಯಿಸಿಕೊಂಡಿರುತ್ತಾರೆ. ಇಂತಹ ಲೋಪದೋಷಗಳನ್ನು ಸರಿಪಡಿಸಿ ಬಸವಣ್ಣನವರ ಕುರಿತಾಗಿ ಸಮಾಜಕ್ಕೆ ಮತ್ತು ಇತರೆ ಭಾಷಿಕರಿಗೆ. ವೀರಶೈವೇತರ ಧರ್ಮಿಯರಿಗೆ ನಿಜವಾದ ಸತ್ಯವನ್ನು ತಿಳಿಯಪಡಿಸುವ ಉದ್ದೇಶದಿಂದ ಎಂ. ಪಿ. ಪಾಟೀಲರು ಈ ಸಂಶೋಧನೆಯನ್ನು ಮಾಡಿದ್ದಾರೆ.

ಬಸವಣ್ಣನವರ ಸಂದೇಶಗಳು ಪ್ರಪಂಚದ ಮೂಲೆ ಮೂಲೆಯಲ್ಲಿಯೂ ಪ್ರಸಿದ್ಧಿ ಪಡೆದಿರುತ್ತವೆ. ಇಂಥ ಮಹನೀಯರ ಜೀವನ ಚರಿತ್ರೆಗೆ ಸ್ಪಷ್ಟವಾದ ರೂಪ ಕೊಡುವ ಕಾರ್ಯ ಈ ಅಧುನಿಕ ಯುಗದಲ್ಲಿ ನಡೆಯಬೇಕಾಗಿದೆ. ಸಿದ್ಧ ಸಾಧಕರ ಕುರಿತು ಕೇವಲ ಆಧ್ಯಾತ್ಮಿಕ. ಧರ್ಮ. ವಿಶ್ವ ಬಂಧುತ್ವದಂಥ ತಾತ್ವಿಕ ವಿಷಯಗಳನ್ನು ಪರಿಚಯಿಸಿ ಕೊಡುವದಕ್ಕಿಂತ 'ಧರ್ಮಾತ್ಮರ ಆಧ್ಯಾತ್ಮ ಜೀವನದ'[೧] ಜೊತೆಗೆ ಅವರ ಲೌಕಿಕ ಅಂದರೆ ಪ್ರಾಪಂಚಿಕ ಜೀವನವು ಕೂಡಾ ಚರಿತ್ರೆಗೆ ಸಹಾಯಕವಾದ ಅಂಶವಾಗಿರುತ್ತದೆ ಎನ್ನುವ ಮಹೋನ್ನತ ಉದ್ದೇಶದಿಂದ ಎಂ. ಪಿ. ಪಾಟೀಲರು ಬಸವೇಶ್ವರರ ಜೀವನ ಚರಿತ್ರೆಗೆ ಸಂಬಂಧಿಸಿದ ವಿಚಾರಗಳನ್ನು ಮುಖ್ಯವಾಗಿಟ್ಟು ಕೊಂಡು ಈ ಸಂಶೋಧನಾ ಕೃತಿಯಲ್ಲಿ ಚರ್ಚಿಸಿದ್ದಾರೆ.

ಬಸವಣ್ಣವರ ವ್ಯಕ್ತಿತ್ವದ ಕುರಿತಾಗಿ ಭಂಡಾರಕರ ದಾಸಗುಪ್ತಾರಂಥ ವಿದ್ವಾಂಸರು ತಪ್ಪಾಗಿ ಅರ್ಥೈಸಿಕೊಂಡಿರುತ್ತಾರೆ. ಬಸವಣ್ಣನವರು 'ಕುಟೀಲ ನೀತಿಯ ರಾಜಕಾರಣೀ'[೨] ಆಗಿದ್ದರು ಎಂಬುವದನ್ನು ಆ ಕಾಲದ ಕೆಲವೊಂದು ಸಂಗತಿಗಳ ಮೂಲಕ ನಿರೂಪಿಸಿರುತ್ತಾರೆ. ಇದೆ ಪ್ರಕಾರದ ವಾದವನ್ನು ೧೮೮೭ರ ಮೈಸೂರು

ಮತ್ತು ಮುಂಬೈ ಸರ್ಕಾರಗಳ ಗೆಜೆಟಯೇರದಲ್ಲಿ ಪ್ರಕಟಿಸಿರುತ್ತಾರೆ. ೧೯೬೦ ರಲ್ಲಿ ಮಹಾರಾಷ್ಟ್ರದ ಕೊಲ್ಲಾಪೂರ ಜಿಲ್ಲಾ ಗೆಜೆಟಿಯೇರನಲ್ಲಿಯೂ ಕೂಡಾ ಇದೆ ಪ್ರಕಾರದ ವಿಚಾರವನ್ನು ಸೇರಿಸಿರುತ್ತಾರೆ. ಪರಿಣಾಮವಾಗಿ ಎಂ. ಪಿ. ಪಾಟೀಲರು ಇವು ತಪ್ಪು ವಿಚಾರಗಳೆಂದು ಮನಗಂಡರು. ಬಸವಣ್ಣನವರ ಕುರಿತು ಆಳವಾದ ಅಧ್ಯಯನಗಳನ್ನು ಕೈಕೊಂಡು ಸತ್ಯವಾದ ಸಂಗತಿಗಳನ್ನು ಕಂಡುಹಿಡಿದು ಗೇಜೆಟಿಯರನಲ್ಲಿರುವ ಆ ತಪ್ಪು ವಿಷಯಯಗಳನ್ನು ತೆಗೆದು ಹಾಕಬೇಕೆಂದು "ಅಖಿಲ ಭಾರತ ವೀರಶೈವ ಸಂಘದ" ವತಿಯಿಂದ ಮಹಾರಾಷ್ಟ್ರ ಸರ್ಕಾರಕ್ಕೆ ಮನವಿ ಕಳಿಸುತ್ತಾರೆ.ಅದರಂತೆ ಮಹಾರಾಷ್ಟ್ರ ಸರಕಾರ ಮೇಲಿನ ಉಲ್ಲೇಖವನ್ನು ತೆಗೆದು ಹಾಕುತ್ತದೆ. ಆದರೆ ಕೆಲವೊಂದು ತಪ್ಪು ಅಭಿಪ್ರಾಯಗಳು ಹಾಗೆಯೇ ಉಳಿದುಕೊಂಡು ಬಂದಿದ್ದನ್ನು ಗಮನಿಸಿದ ಎಂ. ಪಿ. ಪಾಟೀಲರು ಬಸವಣ್ಣನವರ ಜೀವನ ಚರಿತ್ರೆ ಮತ್ತು ಅವರ ನಿಜವಾದ ವ್ಯಕ್ತಿತ್ವವನ್ನು ಕಟ್ಟಿ ಕೊಡುವ ಪ್ರಾಮಾಣಿಕ ಪ್ರಯತ್ನವನ್ನು ಈ ಸಂಶೋಧನಾ ಕೃತಿಯಲ್ಲಿ ಮಾಡಿದ್ದಾರೆ.

ಎರಡನೇ ಪ್ರಕರಣದಲ್ಲಿ ಬಸವಣ್ಣನವರ ಜನ್ಮಕಾಲ, ಜನ್ಮಸ್ಥಳ, ತಂದೆ–ತಾಯಿಗಳು ಉಪನಯನವಿಧಿ, ಸಂಗಮ ಕ್ಷೇತ್ರದ ವಾಸ ಮುಂತಾದ ವಾದಗ್ರಸ್ತ ವಿಚಾರಗಳಿಗೆ ಸೂಕ್ತವಾದ ನ್ಯಾಯವನ್ನು ಒದಗಿಸಿ ಕೊಡುವ ಕಾರ್ಯ ಮಾಡಿದ್ದಾರೆ. ಈ ದೃಷ್ಟಿಯಿಂದ ಬಸವಣ್ಣನವರ ಸಮಕಾಲೀನರಾದ ಶಿವಶರಣರ ಮತ್ತು ಅವರ ವಚನಗಳ, ಶಾಸನಗಳ ಆಧಾರದ ಮೇಲೆ ಬಸವಣ್ಣನವರ ಚರಿತ್ರೆಯನ್ನು ಕಟ್ಟಿ ಕೊಟ್ಟಿದ್ದಾರೆ. ಜನ ಸಾಮಾನ್ಯರಿಗೆ ಬಸವಣ್ಣನವರನ್ನು ದೇವತಾರೂಪಿ, ಅವತಾರ ಪುರುಷ ಎಂಬ ಸಂಭೋಧನೆಯೊಂದಿಗೆ ಆ ಕಾಲದ ಪುರಾಣ ಪುರುಷರು ಇವರ ವ್ಯಕ್ತಿತ್ವವನ್ನು ಪ್ರಚಾರಗೊಳಿಸಿದ್ದರು. ಎಂ. ಪಿ. ಪಾಟೀಲರು ಈ ಅಂಶವನ್ನು ಅಲ್ಲಗಳೆದು ಬಸವಣ್ಣನವರು ೧೨ನೇ ಶತಮಾನ ಕಂಡ ಶ್ರೇಷ್ಠ ವ್ಯಕ್ತಿ ಎಂಬುದನ್ನು ಸಾಬೀತು ಪಡಿಸಿದ್ದಾರೆ. ಅವರ ಹೇಳುವ ಹಾಗೇ "ಇದು ಚರಿತ್ರ ಗ್ರಂಥವಲ್ಲ ಇಲ್ಲಿ ಸಂದರ್ಭವಿಲ್ಲದೆ ಯಾವ ಅಂಶಗಳನ್ನು ಉಲ್ಲೇಖಿಸಿಲ್ಲ ಕೇವಲ ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ ವಾದಗ್ರಸ್ತ ವಿಷಯಗಳಿಗೆ ಪರಿಹಾರ ಕಂಡುಕೊಳ್ಳುವ ಕಾರ್ಯವನ್ನು ಮಾಡಲಾಗಿದೆ".

ಮೂರನೆಯ ಪ್ರಕರಣದಲ್ಲಿ ಬಸವಣ್ಣನವರ ಜನ್ಮಕಾಲದ ಕುರಿತು ಪ್ರಸ್ತಾಪಿಸಿದ್ದಾರೆ. ಬಸವಣ್ಣನವರ ಜನನದ ಕುರಿತು ವಿದ್ವಾಂಸರು ಬೇರೆ ಬೇರೆಯಾದ ಉಲ್ಲೇಖಗಳನ್ನು ನೀಡಿರುತ್ತಾರೆ. ವ್ಯಾಸಕೃತ ಸಂಸ್ಕೃತದ ಬಸವ ಪುರಾಣದಲ್ಲಿ ಬಸವಣ್ಣನವರು ಅಕ್ಷಯ ತೃತಿಯ ದಿನದಂದು ಜನ್ಮ ತಾಳಿದರು ಎಂದು ಹೇಳಿರುವದರಿಂದ ಸಾಮಾನ್ಯವಾಗಿ ಈ ವಾದವನ್ನು ನಂಬಲಾಗಿದೆ. ಬಳ್ಳಾರಿಯ ಶ್ರೀ

ಆರ್. ಆರ್. ಶಾಂತಪ್ಪಾಜಿ ಎಂಬುವವರು ರೋಹಿಣಿ ನಕ್ಷತ್ರದ ಆಧಾರದ ಮೇಲೆ ಬಸವಣ್ಣನವರ ಜನನ ಕ್ರಿ.ಶ. ೧೧೧೫ ರಲ್ಲಿ ಆಯಿತೆಂದು ನಿರ್ಣಯಿಸದ್ದಾರೆ. ಆದರೆ ಮೂಲ ನಕ್ಷತ್ರಕ್ಕೆ ಮತ್ತು ಸಂವತ್ಸರಕ್ಕೆ ತಾಳೆ ಮಾಡಿದಾಗ ಕ್ರಿ.ಶ. ೧೧೧೫ರ ಬದಲಾಗಿ ಕ್ರಿ. ಶ. ೧೧೦೬ ಎಂದು ಆಗುತ್ತದೆ. ಈ ವಾದವನ್ನು ಸಂಶೋಧಕರು ನಿರಾಕರಿಸಿರುತ್ತಾರೆ. ಕಾಲಜ್ಞಾನ ವಚನಗಳಲ್ಲಿ ಬಸವಣ್ಣನವರ ಜನನವನ್ನು ವಿಕ್ರಮ ಸಂವತ್ಸರದ ಶ್ರಾವಣ ಶುದ್ಧ ಸೋಮವಾರ ಎಂದು ಉಲ್ಲೇಖಿಸಿದ್ದರಿಂದ ಅದು ಕ್ರಿ.ಶ. ೧೧೩೧ ಎಂದು ಆಗುತ್ತದೆ. ಇದೆ ವಿಚಾರ ಶಿವತತ್ವ ಚಿಂತಾಮಣಿಯಲ್ಲಿ ಇರುವದರಿಂದ ಬಸವಣ್ಣನವರು ಕ್ರಿ.ಶ. ೧೧೩೧ ರಲ್ಲಿ ಜನಿಸಿ ಕ್ರಿ.ಶ. ೧೧೬೭ ರಲ್ಲಿ ಲಿಂಗೈಕ್ಯರಾದರೆಂದು ಗೊತ್ತುಪಡಿಸಲಾಗಿದೆ[೩].



ಡಾ: ಆರ್. ಸಿ. ಹೀರೆಮಠ ಸಂಪಾದಿಸಿದ 'ಚನ್ನಬಸವಣ್ಣನವರು' ಎಂಬ ಗ್ರಂಥದಲ್ಲಿ ಬಸವಣ್ಣನವರ ಜನ್ಮ ಕಾಲವನ್ನು ಕುರಿತು ಕಾಲಜ್ಞಾನ ವಚನಗಳನ್ನು ಹಿನ್ನೆಲೆಯಾಗಿ ತೆಗೆದುಕೊಂಡಿರುತ್ತಾರೆ. ಈ ಕಾಲಜ್ಞಾನ ವಚನಗಳು ದ್ವಂದ್ವಾರ್ಥಗಳಿಗೆ ಎಡೆ ಮಾಡಿ ಕೊಟ್ಟಿದ್ದರಿಂದ ಸತ್ಯಾಂಶವನ್ನು ಅರಿಯುವದು ಕಷ್ಟಕರವಾಗಿರುತ್ತದೆ.

ಎಂ. ಪಿ. ಪಾಟೀಲರು ಕೆಲವೊಂದು ಆಂಶಗಳ ಆಧಾರದಿಂದ ಬಸವಣ್ಣನವರ ಜನ್ಮಕಾಲ ಕ್ರಿ.ಶ. ೧೧೩೧ ಎಂದು ನಿರ್ಣಯಿಸಿದ್ದಾರೆ. ಈ ವಿಚಾರವನ್ನು ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿರುವ 'ಬಸವಣ್ಣನವರ ವ್ಯಕ್ತಿತ್ವ ಮತ್ತು ಜೀವನ ಸಿದ್ಧಿ' ಎಂಬ ಕೃತಿಯಲ್ಲಿ ಬಸವಣ್ಣನವರ ಜನನದ ಕುರಿತಾಗಿ ಈ ರೀತಿಯ ಉಲ್ಲೇಖವಿರುತ್ತದೆ. ಕ್ರಿ.ಶ. ೧೧೦೬ ರಲ್ಲಿ ಬಸವಣ್ಣನವರು ಹುಟ್ಟಿದ್ದರೆ ಈ ವೇಳೆಗೆ ಅವರಿಗೆ ೬೧ ವರ್ಷ ವಯಸ್ಸಾಗಿರುತ್ತಿತ್ತು ಎನ್ನಬೇಕಾಗುತ್ತದೆ. ಈ ಅಭಿಪ್ರಾಯದಿಂದ ಉದ್ಭವಿಸುವ ತೊಡುಕುಗಳನ್ನು ಶ್ರೀ ಮಲ್ಲನಗೌಡಾ ಪಾಟೀಲರು ಬಸವಣ್ಣನವರ ಚರಿತ್ರೆಯ ಮೇಲೆ ಹೊಸ ಬೆಳಕು ಎಂಬ ಗ್ರಂಥದಲ್ಲಿ ವಿವೇಚಿಸಿದ್ದಾರೆ. ಕೊನೆಯಲ್ಲಿ ಅವರು ೩೬ ವರ್ಷಗಳು ಮಾತ್ರ ಬದುಕಿದ್ದರು ಎಂಬ ರೂಢ ಮೂಲವಾದ ನಂಬಿಕೆಯಲ್ಲಿಯೇ ಹೆಚ್ಚು ಸತ್ಯಾಂಶವಿದೆಯೆಂದು ಕ್ರಿ.ಶ. ೧೧೩೧ ರಲ್ಲಿ ಅವರು ಜನಿಸಿರಬೇಕೆಂಬ ಅಭಿಪ್ರಾಯವನ್ನು ಒಪ್ಪಿದರೆ ಕ್ರಿ.ಶ. ೧೧೬೭ ರ ವೇಳೆಗೆ ಸರಿಯಾಗಿ ೩೬ ವರ್ಷಗಳು ಆಗುವದರಿಂದ ಕಾಲಜ್ಞಾನ ವಚನಗಳು ಮತ್ತು ಶಿವತತ್ವ ಚಿಂತಾಮಣಿ ಕೃತಿ ಹೇಳಿಕಗಳು ಸರಿ ಇರಬಹುದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಬಹುಶ: ಇದನ್ನು ಒಪ್ಪಿಕೊಳ್ಳಬಹುದೆಂದು ತೋರುತ್ತದೆ[೪]. ಈ ಉಲ್ಲೇಖಿತ ವಿಷಯದಲ್ಲಿ ಇರುವ ವಿಚಾರಗಳನ್ನು ಗಮನಿಸಿದಾಗ ಬಸವಣ್ಣನವರ ಜನನದ ಕುರಿತು ಎಂ. ಪಿ. ಪಾಟೀಲರು ಮಾಡಿದ ಅಧ್ಯಯನ ಹೆಚ್ಚು ಸತ್ಯಾಂಶದಿಂದ ಕೂಡಿರುತ್ತದೆ.

ಪ್ರಕರಣ ನಾಲ್ಕರಲ್ಲಿ ಬಸವಣ್ಣನವರ ಜನ್ಮಸ್ಥಳ ತಂದೆ ತಾಯಿಗಳ ಕುರಿತು ಚರ್ಚಿಸಿದ್ದಾರೆ. ಲೋಕ ರೂಢಿ ಒಪ್ಪಿಕೊಂಡಂತೆ ಬಸವಣ್ಣನವರ ಜನ್ಮಸ್ಥಳ ಬಾಗೇವಾಡಿ ಬಳಿ ಇರುವ ಇಂಗಳೇಶ್ವರ. ಅವರ ತಂದೆ ಮಾದರಸ ತಾಯಿ ಮಾದಲಾಂಬಿಕೆ. ಈ ವಿಷಯದ ಕುರಿತಾಗಿ ಕೆಲವೊಂದು ವಾದಗ್ರಸ್ತ ವಿಚಾರಗಳು ಹುಟ್ಟಿಕೊಂಡಿದ್ದರ ಪರಿಣಾಮವಾಗಿ ಅವುಗಳಲ್ಲಿಯ ತೊಡುಕುಗಳನ್ನು ನಿವಾರಿಸುವ ಪ್ರಯತ್ನ ಇಲ್ಲಿ ಮಾಡಿದ್ದಾರೆ. ಈ ಕಾರ್ಯಕ್ಕಾಗಿ ಶಿವತತ್ವ ಚಿಂತಾಮಣಿ, ಸಿಂಗಿ ರಾಜ ಪುರಾಣ, ಶರಣ ಲೀಲಾಮೃತ, ಬಸವರಾಜ ದೇವರ ರಗಳೆ, ಭೀಮ ಕವಿಯ ಬಸವ ಪುರಾಣ ಕೃತಿಗಳಲ್ಲಿಯ ಉಲ್ಲೇಖಗಳನ್ನು ಗಮನಿಸಿರುವರು. ಬಸವಣ್ಣನವರು ಬಾಗೇವಾಡಿಯ ಇಂಗಳೇಶ್ವರ ಗ್ರಾಮದ ಕಮ್ಮೆ ಕುಲದ ಮಾದರಸ ಮತ್ತು ಮಾದಾಂಬಿಕೆ ಇವರ ಉದರದಲ್ಲಿ ಹುಟ್ಟಿದರೆಂಬ ಸಂಶೋಧಕರ ಅಭಿಪ್ರಾಯವನ್ನು ಒಪ್ಪಿಕೊಂಡಿದ್ದಾರೆ. ೧೨ನೇ ಶತಮಾನದಲ್ಲಿ ಬಸವಣ್ಣನೆಂಬುವರು ಇಬ್ಬರು ವ್ಯಕ್ತಿಗಳಿದ್ದರು ಎಂಬುದನ್ನು ಶಾಸನಗಳು ಚಿತ್ರಿಸಿದ್ದರ ಪರಿಣಾಮ ಅವುಗಳ ಸಮರ್ಪಕವಾದ ಅಧ್ಯಯನ ನಡೆಯಬೇಕಿರುತ್ತದೆ. ಈ ವಿಚಾರವಾಗಿ ಡಾ: ಫ್ಲೀಟರು ಸಂಶೋಧನೆ ಕೈಕೊಂಡು ಈ ವಾದವನ್ನು ಎತ್ತಿ ಹಿಡಿದಿರುತ್ತಾರೆ. ಆದರೆ ಈ ವಿಚಾರ ಸಂದೇಹಾಸ್ಪದವಾದ ಕಾರಣ ಖಚಿತವಾದ ಅಭಿಪ್ರಾಯವನ್ನು ಕೊಡದೆ ಆ ನಿಟ್ಟಿನಲ್ಲಿ ಇನ್ನೂ ಹೆಚ್ಚಿನ ಸಂಶೋಧನೆಗಳು ನಡೆಯಬೇಕೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಶ್ರೀ ಬಸವೇಶ್ವರರ ಜೀವನದ ಬಗ್ಗೆ ಸಾಕಷ್ಟು ಸಂಶೋಧನೆ ಮತ್ತು ಸಂಪಾದನೆ ಮಾಡಿದ ಫ.ಗು. ಹಳಕಟ್ಟಿ ಮತ್ತು ಡಾ : ನಂದಿಮಠ ಅವರು ಈ ಶಾಸನಗಳನ್ನು ವಿಮರ್ಶಿಸಿ ಇದರಲ್ಲಿ ಉಲ್ಲೇಖಿಸಲಾದ ಬಸವನು ಬಸವಣ್ಣನಲ್ಲ ಎಂದು ತಮ್ಮ ಅಭಿಪ್ರಾಯವನ್ನು ಪ್ರಕಟ ಪಡಿಸಿರುತ್ತಾರೆ. ಇವರು ನಮೂದಿಸಿದ ಅಭಿಪ್ರಾಯವು ಸರಿ ಇರುತ್ತದೆ ಎಂದು ಎಂ. ಪಿ. ಪಾಟೀಲರು ಒಪ್ಪಿಕೊಂಡಿರುತ್ತಾರೆ.

ಬಸವಣ್ಣವರ ಕೌಟುಂಬಿಕ ಜೀವನದ ಒಟ್ಟು ವಿಷಯವನ್ನು ಗಮನಿಸಿದ ಎಂ. ಪಿ. ಪಾಟೀಲರು ಈ ವಿಚಾರಗಳು ಸರಿಯೆಂದು ಒಪ್ಪಿಕೊಂಡಿರುತ್ತಾರೆ. ಶ್ರೀ ಬಸವೇಶ್ವರರ ಜನ್ಮಸ್ಥಳವು ಬಾಗೇವಾಡಿಯಾಗಿದ್ದು ಅವರ ತಂದೆ ತಾಯಿಗಳು ಬಾಗೇವಾಡಿಯ ಕಮ್ಮೆ ಕುಲದ ಮಾದರಸ ಮತ್ತು ಮಾದಾಂಬಿಕೆ ಆಗಿರುತ್ತಾರೆ. 'ಬಸವೇಶ್ವರರ ಗೋತ್ರ ಸಾಂಖ್ಯಾಯನ ಸಗೋತ್ರ, ಕಾಶ್ಯಪ ಗೋತ್ರ ಆಗಿರುವದಿಲ್ಲ. ಮಣಿಗವಳ್ಳಿ ಶಾಸನೋಕ್ತ ಕಾಶ್ಯಪ ಗೋತ್ರದ ಚಂದಿರಾಜನ ಮಗನಾದ ಕಲಿದೇವರ ದೇವಾಲಯವನ್ನು ಕಟ್ಟಿದ ಬಸವನು ಮತ್ತು ಕಲ್ಯಾಣದ ಬಸವಣ್ಣ ಇಬ್ಬರು ಬೇರೆ ವ್ಯಕ್ತಿಗಳಾಗಿದ್ದರು. ಮಣಿಗವಳ್ಳಿಯ ಪುರಪ್ರಭು ಮಾದಿರಾಜನು ಬಸವೇಶ್ವರರ ಸಾಕು

ತಂದೆಯಲ್ಲ. ಶಾಸನದಲ್ಲಿಯ ಮಣಿಗವಳ್ಳಿಯ ಪುರಪ್ರಭು ಮಾದಿರಾಜನು ಮತ್ತು ಬಸವೇಶ್ವರರ ಜನಕ ತಂದೆಯಾದ ಮಾದರಸ ಅಥವಾ ಮಾದಿರಾಜ ಇವರಿಬ್ಬರು ಬೇರೆ ಬೇರೆ ವ್ಯಕ್ತಿಗಳೆಂದು ಅಧ್ಯಯನದ ಆಧಾರದಿಂದ ತಿಳಿಸಿದ್ದಾರೆ.

ಬಸವಣ್ಣನವರ ಉಪನಯನವಿಧಿ ಮತ್ತು ಸಂಗಮಕ್ಷೇತ್ರದ ವಾಸದ ಕುರಿತು ಹರಿಹರ ಕವಿಯ ಬಸವರಾಜ ದೇವರಗಳೆ, ಭೀಮ ಕವಿಯ ಬಸವ ಪುರಾಣ, ಚಾಮರಸನ ಪಭುಲಿಂಗ ಲೀಲೆ, ಸಿಂಗೀರಾಜನ ಸಿಂಗೀರಾಜ ಪುರಾಣ ಕೃತಿಗಳಲ್ಲಿ ಭಿನ್ನಾಭಿಪ್ರಾಯಗಳಿರುವುದು ಕಂಡು ಬರುತ್ತದೆ. ಉಪನಯನ ವಿಧಿ ಕಾರ್ಯಕ್ಕೆ ಒಂದು ನಿರ್ದಿಷ್ಟ ವಯಸ್ಸಿನ ಮಿತಿ ಇರುತ್ತದೆ. ಈ ಕೃತಿಗಳಲ್ಲಿ ಅದನ್ನು ಎಲ್ಲಿಯೂ ಪ್ರಸ್ತಾಪಿಸಿರುವುದಿಲ್ಲ. ಬಸವಣ್ಣನವರಿಗೆ ಈ ಸಂಸ್ಕಾರವಿಧಿಯ ಮೇಲೆ ಎಳ್ಳಷ್ಟು ನಂಬಿಕೆ ಕೂಡ ಇರಲಿಲ್ಲ. ಶಿವನ ಆರಾಧನೆಯನ್ನು ಹಂಬಲಿಸುತ್ತ ಕೂಡಲ ಸಂಗಮದಲ್ಲಿ ನೆಲಿಸಿದ್ದರೆಂಬ ಸಂಗತಿಗಳು ಈಗಾಗಲೇ ತಿಳಿದಿರುತ್ತದೆ. ಆ ಕಾಲದಲ್ಲಿ ವೀರಶೈವ ಧರ್ಮದ ಮುಖ್ಯ ಕೇಂದ್ರವಾಗಿ ಕೂಡಲ ಸಂಗಮವು ಕಾರ್ಯನಿರ್ವಹಿಸುತ್ತಿತ್ತು. ಬಸವಣ್ಣನವರಿಗೆ ಬ್ರಾಹ್ಮಣ ಸಂಪ್ರದಾಯ ಸಂಸ್ಕೃತಿ ಒಡಿಸದ ಕಾರಣ ಸಂಗಮನಾಥನ ಸನ್ನಿದಿಯೇ ಶ್ರೇಷ್ಠವೆಂದು ತಿಳಿದು ಬಾಲ್ಯದಲ್ಲಿಯೇ ಮನೆ ಬಿಟ್ಟು ಅಲ್ಲಿಯೇ ನೆಲೆಸಿರುತ್ತಾರೆ ಎಂಬ ವಿಚಾರವನ್ನು ಎಂ. ಪಿ. ಪಾಟೀಲರು ಒಪ್ಪಿಕೊಂಡಿದ್ದಾರೆ.

ತರುವಾಯ ಬಸವಣ್ಣನವರು ಕಲ್ಯಾಣಕ್ಕೆ ಹೋದರೆಂದು ಕೆಲವರು, ಮಂಗಳವೇಢೆಗೆ ಹೋದರೆಂದು ಕೆಲವರು ವಾದಿಸುತ್ತಾರೆ. ಈ ಎರಡು ವಾದಗಳನ್ನು ಪುಷ್ಟೀಕರಿಸಲಾಗಿದೆ. ಕಾರಣ ಬಸವಣ್ಣನವರು ಕಲ್ಯಾಣದಲ್ಲಿ ಅಧಿಕಾರವನ್ನು ವಹಿಸಿಕೊಳ್ಳುವ ಸಂದರ್ಭದಲ್ಲಿ ಕಲ್ಯಾಣದ ಅಧಿಪತಿಯಾಗಿ ಬಿಜ್ಜಳ ಮಹಾರಾಜನು ಅಧಿಕಾರ ನಡೆಸುತ್ತಿರುತ್ತಾನೆ. ಕಲ್ಯಾಣಕ್ಕೆ ಬಂದ ಬಸವಣ್ಣನವರಿಗೆ ಬಿಜ್ಜಳನು ಅವರ ಪಾಂಡಿತ್ಯವನ್ನು ಪರೀಕ್ಷಿಸಿ ಅವರಿಗೆ ತನ್ನ ರಾಜ್ಯದಲ್ಲಿ ಅರ್ಥಮಂತ್ರಿ ಸ್ಥಾನವನ್ನು ನೀಡುತ್ತಾನೆ. ಈ ವಿಚಾರವನ್ನು ಗಮನಿಸಿದರೆ ಕಲ್ಯಾಣ ಮತ್ತು ಮಂಗಳವೇಢೆಗಳು ಬಿಜ್ಜಳನಿಗೆ ಸೇರಿದ್ದರಿಂದ ಬಸವಣ್ಣನವರು ಮಂಗಳವೇಢೆಗೆ ಹೋಗುವದರ ಬದಲು ನೇರವಾಗಿ ಕಲ್ಯಾಣಕ್ಕೆ ಹೋದರು ಎಂದು ಎಂ.ಪಿ.ಪಾಟೀಲರು ಸಮರ್ಥಿಸಿಕೊಂಡಿದ್ದಾರೆ.

ಬಿಜ್ಜಳನು ಜೈನ ಧರ್ಮಿಯನಾಗಿದ್ದ ಎಂಬ ವಿಚಾರವು ಚರ್ಚಾರ್ಹವಾಗಿರುತ್ತದೆ. ಇದೇ ಕಾರಣದಿಂದ ಬಸವಣ್ಣನವರಿಗೂ ಹಾಗೂ ಬಿಜ್ಜಳನಿಗೂ ನಡುವೆ ದ್ವೇಷ ಉಂಟಾಗಿ ಕಲ್ಯಾಣ ಕ್ರಾಂತಿಗೆ ಕಾರಣವಾಯಿತು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ. ಆದರೆ ಅದು ಸುಳ್ಳು ಅಭಿಪ್ರಾಯವಾಗಿದೆ. ಕಾರಣ ಆ ಕಾಲದಲ್ಲಿ ಜೈನ ಧರ್ಮ ಪ್ರಮುಖ ಧರ್ಮವಾಗಿತ್ತೆಂಬುದು ನಿಜ. ಆದರೆ

ಬಿಜ್ಜಳನು ಜೈನನಾಗಿರಲಿಲ್ಲ. ಆತನು ಶೈವ ಧರ್ಮದ ಕಟ್ಟಾ ಅನುಯಾಯಿಯಾಗಿದ್ದನೆಂದು ಮತ್ತು ಈ ಧರ್ಮಕ್ಕೆ ಆತ ಪ್ರೋತ್ಸಾಹ ನೀಡಿದ್ದನೆಂದು ಬನವಸೆ ನಾಡಿನಲ್ಲಿ ದೊರೆತ ಶಾಸನಗಳ ಆಧಾರದಿಂದ ತಿಳಿದು ಬರುತ್ತದೆ.

೧೨ನೇ ಶತಮಾನದ ಧಾರ್ಮಿಕ ಮತ್ತು ಸಾಮಾಜಿಕ ಪರಿಸ್ಥಿತಿಯನ್ನೊಮ್ಮೆ ಅವಲೋಕಿಸಿದಾಗ ಜಾತಿ ವ್ಯವಸ್ಥೆಯ ಪಿಡುಗು ಆ ಕಾಲದಲ್ಲಿಯೂ ವಿರಾಜಮಾನವಾಗಿ ಬೆಳೆದಿತ್ತು. ಬ್ರಾಹ್ಮಣರನ್ನು ದೇವರಂತೆ ಕಾಣುವದು, ಶೂದ್ರರನ್ನು ಸೇವಕರಂತೆ ಕಾಣುವ ವ್ಯವಸ್ಥೆ ನಿರ್ಮಾಣವಾಗಿತ್ತು. ನೈತಿಕತೆಯ ಪ್ರಮುಖ ಅಸ್ತ್ರಧಾರಿಯಾದ ಬಸವಣ್ಣನವರು ಇದರ ವಿರುದ್ಧ ಹೋರಾಟ ಮಾಡುತ್ತಾರೆ. ಬ್ರಾಹ್ಮಣರು ನಡೆಸುವ ಯಜ್ಞಯಾಗಾದಿ. ಹೋಮ ಹವನಗಳನ್ನು ಕಟುವಾಗಿ ವಿರೋಧಿಸುತ್ತಾರೆ. ಮನುಜ ಕುಲದ ನಿಜವಾದ ಪಾವಿತ್ರ್ಯತೆ ಏನೆಂಬುದನ್ನು ಅರಿತು ಕ್ರಾಂತಿಯ ಮೂಲಕ ನಿಜವಾದ ಜಾತೀಯ ಮೌಲ್ಯಗಳನ್ನು ತಿಳಿಯಪಡಿಸುವ ಕಾರ್ಯ ಮಾಡುತ್ತಾರೆ. ಈ ಸಂದರ್ಭದಲ್ಲಿ ಕರ್ನಾಟಕದಲ್ಲಿ ಜೈನ ಧರ್ಮವು ಕ್ರಮೇಣ ಕ್ಷೀಣಿಸಿ ವೀರಶೈವ ಧರ್ಮವು ಮಠ ಮಂದಿರಗಳನ್ನು ಸ್ಥಾಪಿಸುತ್ತಾ ಹೋದದ್ದರಿಂದ ವೀರಶೈವ ಧರ್ಮವು ಅತೀ ಕಡಿಮೆ ಅವಧಿಯಲ್ಲಿ ಹೆಚ್ಚು ಪ್ರಸಿದ್ಧಿ ಪಡೆಯಿತೆಂಬ ವಿಚಾರವನ್ನು ಎಂ. ಪಿ. ಪಾಟೀಲರು ಹೇಳಿದ್ದಾರೆ.

ಬಿಜ್ಜಳನು ಜೈನ ಧರ್ಮಿಯನಾಗಿದ್ದ ಎಂದು ಹೇಳುವದಕ್ಕೆ ವಿರುಪಾಕ್ಷ ಪಂಡಿತ ತನ್ನ 'ಚೆನ್ನಬಸವ ಪುರಾಣದಲ್ಲಿ' ಹಾಗೂ ಧರಣಿಪಂಡಿತನು ತನ್ನ ಬಿಜ್ಜಳರಾಯ ಪುರಾಣದಲ್ಲಿ ಕೆಲವು ಉಲ್ಲೇಖಗಳನ್ನು ಹೇಳಿರುತ್ತಾನೆ. ಅದರೆ ಅವು ನಂಬಲು ಅರ್ಹವಾಗಿಲ್ಲ. ಕಾರಣ 'ಹರಿಹರದಲ್ಲಿ ದೊರೆತಿರುವಂತಹ Davanagere 42 of 1162 AD EL XI'[*] ಎಂಬ ಶಾಸನದಲ್ಲಿ ಇವನ ವಂಶಾವಳಿಯ ಚಿತ್ರಣವಿರುವದರಿಂದ ಈತ ಕಲಚೂರಿ ರಾಜವಂಶದವನೆಂಬ ಉಲ್ಲೇಖ ಸ್ಪಷ್ಟವಾಗಿರುತ್ತದೆ. ಆದ್ದರಿಂದ ಬಿಜ್ಜಳನು ಶೈವ ಧರ್ಮಿಯನಾಗಿದ್ದ ಎಂಬುದನ್ನು ಈ ಶಾಸನದ ಮೂಲಕ ಎಂ.ಪಿ. ಪಾಟೀಲರು ನಿರೂಪಿಸಿದ್ದಾರೆ.

ಕೆಲವೊಂದು ಕಲ್ಪನೆಗೆ ಮೀರಿದ ವಿಚಾರಗಳನ್ನೆ ಮುಂದಿಟ್ಟುಕೊಂಡು ಬಿಜ್ಜಳನನ್ನು ಜೈನ ಧರ್ಮಿಯನೆಂದು ಹೇಳುವದು ತಪ್ಪು ಅಭಿಪ್ರಾಯವಾಗಿದೆ. ಎಂ. ಪಿ. ಪಾಟೀಲರು ಅದಕ್ಕೊಂದು ಪೂರಕವಾದ ಉದಾಹರಣೆಯನ್ನು ಕೊಡುತ್ತಾರೆ. ಕರ್ನಾಟಕದ ಇತಿಹಾಸವನ್ನು ತೆಗೆದುಕೊಂಡಾಗ ಇಲ್ಲಿ ಆಳಿ ಹೋದಂತಹ ಪ್ರತಿಯೊಂದು ರಾಜ ಮನೆತನಗಳು ಎಲ್ಲ ಧರ್ಮಿಯರಿಗೂ ಆಶ್ರಯವನ್ನು ನೀಡುತ್ತಾ ಬಂದಿರುವದನ್ನು ಗಮನಿಸುತ್ತೇವೆ. ಇದಕ್ಕೆ ಬಿಜ್ಜಳನು ಹೊರತಾಗಿರುವುದಿಲ್ಲ. ಈ ವಿಷಯಕ್ಕೆ ಸಂಭದಿಸಿದಂತೆ ಎಂ. ಪಿ. ಪಾಟೀಲರು ಇಪ್ಪತ್ತೈದು ಶಾಸನಗಳನ್ನು

ನೀಡುತ್ತಾರೆ. ಆ ಮೂಲಕ ಬಿಜ್ಜಳ ಮಹಾರಾಜನು ಜೈನನಾಗಿದ್ದಿರಲಿಲ್ಲ. ಆತ ಶೈವ ಧರ್ಮಿಯನಾಗಿದ್ದ ಎಂಬ ವಾದವನ್ನು ಎತ್ತಿ ಹಿಡಿದಿದ್ದಾರೆ.

ಬಸವಣ್ಣನವರು ಕಸಪ್ಪಯ್ಯನೆಂಬ ಹೆಸರು ಧರಿಸಿಕೊಂಡು ಬನವಸೆ ನಾಡಿನ ಸರ್ವಾಧಿಕಾರಿಯಾಗಿದ್ದನೆಂದು ವಿದ್ವಾಂಸರು ವಾದಿಸುತ್ತಾರೆ. ಈ ವಾದವನ್ನು ಎಂ. ಪಿ. ಪಾಟೀಲರು ಅಲ್ಲಗಳೆದಿದ್ದಾರೆ. ಬಸವಣ್ಣನವರು ಕೂಡಲ ಸಂಗಮದಿಂದ ನೇರವಾಗಿ ಕಲ್ಯಾಣಕ್ಕೆ ಬಂದು ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿ ಬಲದೇವನ ಕರಣಿಕ ವೃತ್ತಿಯನ್ನು ಮುಂದುವರಿಸಿಕೊಂಡು ಹೋಗಿರುತ್ತಾರೆ. ಜೊತೆಯಲ್ಲಿ ಸಾಮಾಜಿಕ ಧಾರ್ಮಿಕ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಬಿಜ್ಜಳನ ರಾಜಧಾನಿಯಲ್ಲಿ ಕಸಪ್ಪಯ್ಯನೆಂಬ ಬೇರೊಬ್ಬ ವ್ಯಕ್ತಿ ಇದ್ದನು. ಅವನು ಬನವಸೆ ನಾಡಿಗೆ ಸರ್ವಾಧಿಕಾರಿಯೆಂದು ಬಿಜ್ಜಳನಿಂದ ನೇಮಕಗೊಂಡಿದ್ದನು. ಎಂಬುದಕ್ಕೆ ಎಂ. ಪಿ. ಪಾಟೀಲರು ತಾಳಗುಂದ ಶಿಲಾ ಶಾಸನ, ಬಳ್ಳಿಗಾಂವಿ ಶಿಲಾ ಶಾಸನ, ಬಾರಂಗಿ ಶಿಲಾ ಶಾಸನ, ಬೆಣ್ಣೆಗೇರೆ ಶಿಲಾ ಶಾಸನ, ಹರಿಹರ ಶಿಲಾ ಶಾಸನ, ಮಾಯಿತಮ್ಮನ ಶಿಲಾಶಾಸನ, ಹಲಸೂರು ಶಿಲಾಶಾಸನಗಳ ಮೂಲಕ ಪತ್ತೆ ಹಚ್ಚಿದ್ದಾರೆ. ಇವುಗಳ ಆಧಾರದ ಮೇಲೆ ಕಸಪ್ಪಯ್ಯ ಮತ್ತು ಬಸವಣ್ಣ ಇಬ್ಬರು ಬೇರೆ ಬೇರೆ ವ್ಯಕ್ತಿಗಳಾಗಿದ್ದರೆಂದು ಹೇಳುತ್ತಾರೆ. ಕಸಪ್ಪಯ್ಯನು ದಕ್ಷಿಣದ ಭಾಗದಲ್ಲಿ ಸರ್ವಾಧಿಕಾರಿಯೆಂದು ನೇಮಕ ಹೊಂದಿ ಬನವಸೆ ನಾಡನ್ನು ಪ್ರಮುಖ ನೆಲೆಯನ್ನಾಗಿ ಮಾಡಿಕೊಂಡು ಬಳ್ಳಿಗಾಂವಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳ್ವಿಕೆ ನಡೆಸುತ್ತಿದ್ದನು.

ಈ ಮೇಲಿನ ವಿಷಯಗಳಿಂದ ಕಲ್ಯಾಣದ ಬಸವೇಶ್ವರರು, ಬನವಸೆ ನಾಡಿನ ಕಸಪ್ಪಯ್ಯ ಇಬ್ಬರು ಬೇರೆ ಬೇರೆ ವ್ಯಕ್ತಿಗಳಾಗಿದ್ದರು. ಪ್ರಜಾ ರಕ್ಷಣೆಯ ಹಿತಚಿಂತಕರಾದ ಬಸವಣ್ಣನವರಿಗೂ ಸರ್ವಾಧಿಕಾರ ಮನೋಭಾವದ ಕಸಪ್ಪಯ್ಯನಿಗೂ ಯಾವದೇ ರೀತಿಯ ಸಂಬಂಧವಿರುವುದಿಲ್ಲ. ಹೆಸರಿನ ಆಧಾರದ ಮೇಲೆ ನಾವು ಈ ಇಬ್ಬರು ವ್ಯಕ್ತಿಗಳು ಒಂದೆ ಎಂದು ಸಂಶೋಧನೆ ದೃಷ್ಟಿಯಿಂದ ಗಮನಿಸಿದರೆ ಅದು ಹಾಸ್ಯಾಸ್ಪದವೆನಿಸುತ್ತದೆ. ಅಲ್ಲದೆ ಕಸಪ್ಪಯ್ಯನೆಂಬ ಹೆಸರಿನ ವ್ಯಕ್ತಿಯು ಅತೀಯಾದ ವರ್ಣಾಶ್ರಮ ಧರ್ಮಿಯಾಗಿದ್ದು ಶೈವಮತದ ಪರಮ ಭಕ್ತನಾಗಿದ್ದನು. ಹರಿಹರ ಶಾಸನದ ನಿರ್ಮಾಣದ ಕಾಲಕ್ಕಾಗಲೆ ಬಸವಣ್ಣನವರು ವೀರಶೈವ ಧರ್ಮವನ್ನು ಪುನರ್ ಉತ್ತೇಜನಗೊಳಿಸಿ ಕಲ್ಯಾಣದಲ್ಲಿ ಅನುಭವ ಮಂಟಪ ಸ್ಥಾಪಿಸಿದ್ದರೆಂದು ತಿಳಿದು ಬರುತ್ತದೆ. ಹಾಗೂ ಕಸಪ್ಪಯ್ಯನಿಗೆ ಕಸಪ್ಪಯ್ಯ ಎಂಬ ಹೆಸರು ಬಿಟ್ಟರೆ ಬೇರೆ ಯಾವ ಹೆಸರು ಇದ್ದಿರಲಿಲ್ಲ. ಆದ್ದರಿಂದ ಬಸವಣ್ಣನವರಿಗು ಬನವಸೆ ನಾಡಿನ ಕಸಪ್ಪಯ್ಯನಿಗು ಯಾವದೇ ತೆರನಾದ ಸಂಬಂಧವಿರುವದಿಲ್ಲ.

ಬಸವಣ್ಣನವರ ಜೀವನ ಚರಿತ್ರೆಯನ್ನು ಅಭ್ಯಸಿಸುವ ಸಂದರ್ಭದಲ್ಲಿ ಅವರು ಪ್ರಧಾನ ಮಂತ್ರಿಯಾಗಿದ್ದರು ಎಂಬುದು ವಾದಗ್ರಸ್ತ ವಿಷಯವಾಗಿ ಉಳಿದಿರುತ್ತದೆ. ಪ್ರಮುಖ ವಚನಗಳ ಅಧ್ಯಯನದ ಆಧಾರದ ಮೇಲಿಂದ ಇವರೊಬ್ಬ ಶ್ರೇಷ್ಠ ವ್ಯಕ್ತಿಗಳಾಗಿದ್ದರು. ಬುದ್ಧ, ಗಾಂಧೀಜಿಯವರಂತೆ ಸಾತ್ವಿಕ ಮನೋಭಾವ ಉಳ್ಳವರಾಗಿದ್ದರು. ಗುರು-ಲಿಂಗ-ಜಂಗಮ ಸೇವೆಯೇ ಪರಮ ಸೇವೆ ಎಂದು ನಂಬಿದ್ದರು. ಬಸವಣ್ಣನವರ ರಾಜಕೀಯ ಜೀವನ ಚರಿತ್ರೆಯ ಮೇಲೆ ಬೆಳಕು ಚೆಲ್ಲಿದಾಗ ಹಿಂದಿನ ಕನ್ನಡೇತರ ವಿದ್ವಾಂಸರು ಅವರನ್ನು "ಕುಟೀಲ ನೀತಿ ರಾಜಕಾರಣಿ" ಎಂದು ತಮ್ಮ ಕೃತಿಯಲ್ಲಿ ಬರೆದಿದ್ದರು. ಇದನ್ನು ಮನಗಂಡು ಎಂ.ಪಿ.ಪಾಟೀಲರು ಬಸವಣ್ಣನವರ ರಾಜಕೀಯ ಜೀವನದ ಕುರಿತು ಅಭ್ಯಸಿಸುವ ಕಾರ್ಯ ಮಾಡಿದ್ದಾರೆ. ಈಗಾಗಲೇ ಚರ್ಚಿಸಿದ ಹಾಗೇ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಕರಣಿಕ ವೃತ್ತಿಯನ್ನು ಮಾತ್ರ ಕೈಗೊಂಡಿದ್ದರು. ಅದನ್ನು ಬಿಟ್ಟು ಬೇರೆ ಯಾವ ಹುದ್ದೆಯನ್ನು ಅವರು ಅಲಂಕರಿಸಿರಲಿಲ್ಲ. ಬಸವಣ್ಣನವರ ವ್ಯಕ್ತಿತ್ವಕ್ಕೂ ಬಿಜ್ಜಳನು ವ್ಯಕ್ತಿತ್ವಕ್ಕೂ ಅಜಗಜಾಂತರ ವ್ಯತ್ಯಾಸವಿರುವದು ಕಂಡು ಬರುತ್ತದೆ. ಯುದ್ಧ ಸಂಸ್ಕೃತಿಯ ಬಿಜ್ಜಳ ಮಹಾರಾಜನು. ಅಹಿಂಸೆಯೇ ಪರಮೋಧರ್ಮ ಎಂದು ನಂಬಿದ್ದ ಬಸವಣ್ಣನವರಿಗೆ ತನ್ನ ಆಸ್ಥಾನದಲ್ಲಿ ಪ್ರಧಾನ ಮಂತ್ರಿ ಹುದ್ದೆಗೆ ನೇಮಿಸಲು ಸಾಧ್ಯವೇ ಇರುವುದಿಲ್ಲ.

ಬಿಜ್ಜಳನ ಆಸ್ಥಾನದಲ್ಲಿ ಬಸವಣ್ಣನವರು ಸೇನಾಧಿಪತಿಯಾಗಿದ್ದರೆಂದು ಸಂಶೋಧಕರು ವಾದಿಸುತ್ತಾರೆ. ಬಸವಣ್ಣನವರು ತಮ್ಮ ವಚನದಲ್ಲಿ ಹೇಳಿದಂತೆ "ಸಕಲ ಜೀವಾತ್ಮರಿಗೆ ಲೇಸನು ಬಯಸುವ ನಮ್ಮ ಕೂಡಲ ಸಂಗನ ಶರಣರೆ ನಿಜವಾದ ಕುಲಜರು" ಎಂದು ಹೇಳುವ ಸಾತ್ವಿಕ ವ್ಯಕ್ತಿ ಬಸವಣ್ಣನವರು ಪ್ರಾಣಿಬಲಿ, ಯಜ್ಞ ಯಾಗಾದಿಗಳಂತಹ ಆಚರಣೆಗಳನ್ನು ನಿಷೇಧಿಸಲು ಹೋರಾಡಿರುತ್ತಾರೆ. ಇಂಥ ವ್ಯಕ್ತಿ ಬಿಜ್ಜಳನ ಸೈನ್ಯದಲ್ಲಿ ಸೇನಾಧಿಪತಿ ಆಗಿದ್ದರೆಂಬುದು ಸತ್ಯಕ್ಕೆ ದೂರುವಾದ ವಿಚಾರವಾಗಿರುತ್ತದೆ.

ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನ ಮಂತ್ರಿ ಆಗಿರಲಿಲ್ಲ. ಇದಕ್ಕೆ ಎಂ. ಪಿ. ಪಾಟೀಲರು ಬಸವಣ್ಣನವರ ವಿಚಾರಧಾರೆಗಳು ಮಹಾತ್ಮ ಗಾಂಧೀಜಿಯವರ ಮೇಲೆ ಪರಿಣಾಮ ಬೀರಿರುವದನ್ನು ತೌಲನಿಕವಾಗಿ ಅಧ್ಯಯನ ಮಾಡಿದ್ದಾರೆ. ಈ ಇಬ್ಬರು ಮಹನೀಯರು ತಮ್ಮ ಜೀವನದಲ್ಲಿ ಅಹಿಂಸೆಯ ಹಿಂಬಾಲಕರಾಗಿ ದುಡಿದವರಾಗಿದ್ದಾರೆ. ಇಂತಹ ಶ್ರೇಷ್ಠ ವ್ಯಕ್ತಿತ್ವ ಹೊಂದಿದ್ದ ಬಸವಣ್ಣನವರು ಪ್ರಧಾನ ಮಂತ್ರಿ ಹುದ್ದೆಯನ್ನು ವಹಿಸಿಕೊಂಡಿರಲು ಯಾವದೇ ಸಾಧ್ಯತೆಗಳಿರುವುದಿಲ್ಲ.

ಕಲ್ಯಾಣದ ಕಲಚೂರಿಗಳ ಆಸ್ಥಾನದಲ್ಲಿ ವರ್ಣ ವ್ಯವಸ್ಥೆಯ ಪದ್ಧತಿ ಆಚರಣೆಯಲ್ಲಿತ್ತು ಎಂಬುದನ್ನು ಎಂ. ಪಿ. ಪಾಟೀಲರು ಗುರುತಿಸಿದ್ದಾರೆ. 'ಆ ಕಾಲದಲ್ಲಿ ಶೈವ ಧರ್ಮದ ಪ್ರಮುಖ ಪಂಥಗಳಲ್ಲಿ ಒಂದಾದ ಕಾಳಾಮುಖ ಪಂಥವು ಕರ್ನಾಟಕದಲ್ಲಿ ಪ್ರಸಿದ್ಧಿ ಹೊಂದಿತ್ತು. ಈ ಪಂಥದ ಧರ್ಮ ಗುರುಗಳು ಚಾಲುಕ್ಯ ಹಾಗೂ ಕಲಚೂರಿ ಮನೆತನದ ರಾಜ ಗುರುವಾಗಿದ್ದರೆಂದು[೬]' ಸಾಮಾನ್ಯವಾದ ಸಂಗತಿಯಾಗಿರುತ್ತದೆ.

೧೧, ೧೨ನೇ ಶತಮಾನದಲ್ಲಿ ಜಾತಿ ವ್ಯವಸ್ಥೆ ಕಟ್ಟಳೆಗಳು ಬಹಳ ಕಠಿಣವಾಗಿದ್ದವು. ಜನತೆ ಅವುಗಳನ್ನು ತಪ್ಪದೆ ಪಾಲಿಸುತ್ತಿದ್ದರು. ಇದರಿಂದ ಆ ಕಾಲದ ಜನಜೀವನ ಪದ್ಧತಿಯಲ್ಲಿ ಜಾತಿ ವ್ಯವಸ್ಥೆಯು ಆಳವಾಗಿ ಬೇರೂರಿತ್ತು. ಈ ಪದ್ಧತಿಯನ್ನು ಕಿತ್ತೊಗೆಯುವ ಉದ್ದೇಶದಿಂದ ಬಸವಣ್ಣನವರು ಕಲ್ಯಾಣದಲ್ಲಿ ಧಾರ್ಮಿಕ ಕ್ರಾಂತಿಯನ್ನು ಮಾಡಲು ಮುಂದಾಗುತ್ತಾರೆ. ಅದರ ಫಲವಾಗಿ ಎಲ್ಲ ಜಾತಿಯ ಜನರನ್ನು ಒಟ್ಟುಗೂಡಿಸಿ ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸುತ್ತಾರೆ. ಅಲ್ಲಿ ಎಲ್ಲ ಶಿವಶರಣರಿಗೆ ಲಿಂಗದ ಮಹತ್ವವನ್ನು ತಿಳಿಸಿ ಲಿಂಗ ದಿಕ್ಷೆ ಕೊಡಿಸುತ್ತಾರೆ. ಲಿಂಗ ದಿಕ್ಷೆ ಪಡೆದ ಎಲ್ಲರನ್ನು ಶರಣರೆಂದು ಕರೆದು ಅವರಿಂದ ಅನುಭವದ ಪದಗಳನ್ನು ಹೇಳಿಸುತ್ತಾರೆ. ಇವೇ ವಚನಗಳೆಂದು ಪ್ರಸಿದ್ಧಿ ಪಡೆದಿರುತ್ತವೆ. ಈ ವಚನಗಳ ಪ್ರಭಾವದಿಂದ ಕಲ್ಯಾಣದಲ್ಲಿ ಬದಲಾವಣೆಯ ಗಾಳಿಯು ಬೀಸಲು ಪ್ರಾರಂಭಿಸುತ್ತದೆ. ಇದರಿಂದ ಎಲ್ಲ ಜಾತಿಯ ಜನರು ಬಸವಣ್ಣನವರ ಸಿದ್ಧಾಂತಗಳನ್ನು ಮೆಚ್ಚಿಕೊಂಡು ಅವರ ಶಿಷ್ಯರಾಗುತ್ತಾರೆ. ಪರಿಣಾಮವಾಗಿ ಕಲ್ಯಾಣದಲ್ಲಿ ಅಂತರ್ಜಾತಿಯ ವಿವಾಹಗಳು ನಡೆಯುತ್ತವೆ. ಹೀಗೆ ಸಮಾಜದ ಕಟ್ಟ ಕಡೆಯಲ್ಲಿ ಬದುಕುತಿದ್ದ ಜನರನ್ನು ಮುಖ್ಯವಾಹಿನಿಗೆ ತಂದು ಅವರಿಗೆ ಸಾಮಾಜಿಕ ಸ್ಥಾನಮಾನವನ್ನು ಕಲ್ಪಿಸಿಕೊಟ್ಟ ಕೀರ್ತಿ ಬಸವಣ್ಣನವರಿಗೆ ಸಂದಿರುತ್ತದೆ.

ಇಂತಹ ಕ್ರಾಂತಿಕಾರಕ ಮನೋಭಾವವುಳ್ಳ ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಕರಣಿಕ ವೃತ್ತಿಯನ್ನು ಹೊರತುಪಡಿಸಿ ಬೇರಾವ ಹುದ್ದೆಯನ್ನು ಅಲಂಕರಿಸಲು ಸಾಧ್ಯವಿರುವದಿಲ್ಲ ಎಂಬುದು ಎಂ ಪಿ ಪಾಟೀಲರ ಖಚಿತ ಅಭಿಮತವಾಗಿದೆ.

'ಆರುಮುನಿದು ನಮ್ಮನ್ನೇನು ಮಾಡುವರು
ಊರು ಮುನಿದು ನಮ್ಮನ್ನೆಂತು ಮಾಡುವರು
ನಮ್ಮ ಕುನ್ನಿಗೆ ಕೂಸು ಕೊಡಬೇಡ
ನಮ್ಮ ಸೊನಗಂಗೆ ತಳಿಗೆಯನಿಕ್ಕಬೇಡ
ಆನೆಯ ಮೇಲೆ ಹೋಹನ ಶ್ವಾನ ಕಚ್ಚಬಲ್ಲದೆ
ನಮಗೆ ನಮ್ಮ ಕೂಡಲ ಸಂಗಯ್ಯನುಳ್ಳನಕ್ಕ'

ಎಂಬ ವಚನದಲ್ಲಿಯ ವಿಚಾರವನ್ನು ಗಮನಿಸಿದಾಗ ಬಸವಣ್ಣನವರಿಗೆ ಇಂತಹ ಕಾರ್ಯಗಳನ್ನು ಮಾಡುವದರಿಂದ ಜೀವ ಬೆದರಿಕೆ ಇರುವದು ಕಂಡು ಬರುತ್ತದೆ. ಅದಾವುದಕ್ಕು ಜಗ್ಗದೇ ಸಮಾಜದ ಉನ್ನತಿಗಾಗಿ ಧೈರ್ಯದಿಂದ ಹೋರಾಡಿರುತ್ತಾರೆ.

ಬಸವಣ್ಣನವರು ಪ್ರಧಾನ ಮಂತ್ರಿಯಾಗಿದ್ದಿರಲಿಲ್ಲ ಎಂಬುದಕ್ಕೆ ಶಾಸನ ಸಹಿತ ಉದಾಹರಣೆಯನ್ನು ನೀಡಿದ್ದಾರೆ. ಆ ಕಾಲದಲ್ಲಿ ರಾಜ್ಯದ ಆಡಳಿತವನ್ನು ನೋಡಿ ಕೊಳ್ಳುತ್ತಿದ್ದ ರಾಜರು ತಮ್ಮ ಅಧಿನದಲ್ಲಿರುವ ಊರಿಗೆ, ಮಠ ಮಾನ್ಯಗಳಿಗೆ ದಾನ ದತ್ತಿಗಳನ್ನು ನೀಡಿ ಅದನ್ನು ಶಾಸನಗಳಲ್ಲಿ ಬರೆಯಿಸಿರುವದನ್ನು ಕಾಣುತ್ತೇವೆ. ಒಬ್ಬ ಸಾಮಾನ್ಯ ವ್ಯಕ್ತಿಯು ತನ್ನ ಕುರಿತು ಏನಾದರೊಂದು ಸಾಧನೆಯನ್ನು ಗೈದಿದ್ದರೆ ಅದನ್ನು ಶಾಸನದಲ್ಲಿ ಬರೆಯಿಸುವ ರೂಢಿ ಆ ಕಾಲದಲ್ಲಿ ಪ್ರಸಿದ್ಧವಾಗಿತ್ತು. ಬಸವಣ್ಣನವರು ಒಂದು ವೇಳೆ ಪ್ರಧಾನ ಮಂತ್ರಿಯಾಗಿರುತ್ತಿದ್ದರೆ ಇಂತಹ ಶಾಸನಗಳು ಹೇರಳವಾಗಿ ಕಲ್ಯಾಣದಲ್ಲಿ ಅಥವಾ ಇತರೆ ಪ್ರದೇಶಗಳಲ್ಲಿ ದೊರೆಯಬೇಕಿತ್ತು. ಆದರೆ ಅಂತಹ ಯಾವ ಶಾಸನವು ಸಿಗದೆ ಇರುವುದರಿಂದ ಬಸವಣ್ಣನವುರು ಪ್ರಧಾನಿಯಾಗಿದ್ದರು ಎನ್ನುವ ಸಂಶೋಧಕರ ವಿಚಾರ ತಪ್ಪಾಗಿರುತ್ತದೆ. ಬಸವಣ್ಣನವರಿಗೆ ಪ್ರಧಾನಿಯಾಗುವ ಯಾವ ಆಕಾಂಕ್ಷೆ ಇದ್ದಿರಲಿಲ್ಲ. ಸಾತ್ವಿಕ ಮನೋಭಾವದವರಾಗಿದ್ದ ಇವರು ಆಧ್ಯಾತ್ಮದತ್ತ ಗಮನ ಹರಿಸಿದರೆ ವಿನಹ ಆಡಳಿತ ಬಗ್ಗೆ ಕಿಂಚಿತ್ತು ಆಸೆ ಇದ್ದಿರಲಿಲ್ಲ.

ಬಸವಣ್ಣನವರು ಬಿಜ್ಜಳನ ಆಸ್ಥಾನದಲ್ಲಿ ಪ್ರಧಾನ ಮಂತ್ರಿ ಹುದ್ದೆಯನ್ನು ಅಲಂಕರಿಸಿರಲಿಲ್ಲ ಎಂಬುದಕ್ಕೆ ಹತ್ತು ಹಲವು ನಿದರ್ಶನಗಳನ್ನು ಕೊಟ್ಟಿದ್ದಾರೆ. ಹಾಗೆಯೇ ಐತಿಹಾಸಿಕ ಸಂಗತಿಗಳ ಆಧಾರದ ಮೇಲೆ ಕಲ್ಯಾಣದಲ್ಲಿ ಬಸವಣ್ಣನವರು ಭಂಡಾರ ಮಂತ್ರಿ ಎಂದು ಮಾತ್ರ ಕಾರ್ಯನಿರ್ವಹಿಸಿರುವದನ್ನು ಹಲವು ಅಂಶಗಳ ಮೂಲಕ ಎಂ. ಪಿ. ಪಾಟೀಲರು ನಿರೂಪಿಸಿದ್ದಾರೆ.

ಬಸವಣ್ಣನವರ ಜೀವನ ಚರಿತ್ರೆಯಲ್ಲಿ ಬಿಜ್ಜಳನ ಕೊಲೆಯು ನಿಗೂಢವಾದ ವಿಚಾರಗಳನ್ನು ಹುಟ್ಟುಹಾಕಿರುತ್ತದೆ. ಅಂತಹ ನಿಗೂಢತೆಯನ್ನು ಭೇದಿಸಿ

ಬಸವಣ್ಣನವರಿಗೂ ಮತ್ತು ಬಿಜ್ಜಳನ ಕೊಲೆಗೂ ಯಾವದೇ ತೆರನಾದ ಸಂಬಂಧವಿರುವದಿಲ್ಲ ಎಂಬ ವಿಷಯವನ್ನು ಈ ಲೇಖನದಲ್ಲಿ ಪ್ರಸ್ತಾಪಿಸಿದ್ದಾರೆ.

'ಧರಣಿಪಂಡಿತ ಮತ್ತು ಚಂದ್ರಸಾಗರವರ್ಣಿ ಎಂಬ ಜೈನ ಗ್ರಂಥಕಾರರ'[೭] ಅಭಿಪ್ರಾಯವನ್ನು ಮುಂದಿಟ್ಟುಕೊಂಡು ಸಂಶೋಧಕರು ಬಸವಣ್ಣನವರೆ ಬಿಜ್ಜಳನನ್ನು ಮೋಸದಿಂದ ಕೊಲ್ಲಿಸಿದರು ಎಂದು ತಪ್ಪಾಗಿ ಅರ್ಥೈಸಿದ್ದರು. ಕೆಲವು ಸಂಶೋಧಕರು ಬಿಜ್ಜಳನು ತನ್ನ ಜೀವಿತದ ಕೊನೆಯಲ್ಲಿ ಸಲ್ಲೇಖನ ವ್ರತ ಕೈಕೊಂಡು ಮರಣ ಹೊಂದಿದ ಎಂದು ಜೈನ ಚರಿತ್ರಕಾರರು ಹೇಳಿದ ಅಭಿಪ್ರಾಯವನ್ನು ಹೇಳುತ್ತಾರೆ. ಈ ಎರಡೂ ಅಭಿಪ್ರಾಯಗಳೂ ತಪ್ಪಾಗಿರುತ್ತವೆ. ಈಗಾಗಲೇ ಹೇಳಿರುವ ಹಾಗೇ ಬಿಜ್ಜಳನು ಶೈವ ಮತದವನಾಗಿದ್ದನು ಅವನು ಸಹಜ ಸಾವಿನಿಂದ ಮರಣ ಹೊಂದದೆ ಕೊಲೆಗೈಯಲ್ಪಟ್ಟನೆಂದು ಎಂ. ಪಿ. ಪಾಟೀಲರು ಅಭಿಪ್ರಾಯಪಟ್ಟಿದ್ದಾರೆ. ಅದಕ್ಕೆ ಕೆಲವು ನಿದರ್ಶನಗಳನ್ನು ಒದಗಿಸಿ ಕೊಡುತ್ತಾರೆ. ಆದರೆ ಬಿಜ್ಜಳನ ಕೊಲೆಗೆ ಬಸವಣ್ಣನವರು ಕಾರಣರಲ್ಲ ಎಂಬ ಅಂಶವನ್ನು ಎತ್ತಿ ಹಿಡಿದಿದ್ದಾರೆ.

ಬಿಜ್ಜಳನ ಕೊಲೆಯಲ್ಲಿ ಮುಖ್ಯವಾದ ಮೂರು ವಿಚಾರಗಳು ಚರ್ಚೆಗೆ ಆಸ್ಪದವಾಗಿವೆ. ಮೊದಲನೆಯದು : ಮಧುವರಸ ಮತ್ತು ಹರಳಯ್ಯ ಎಂಬ ಇಬ್ಬರು ಶಿವಶರಣರು ವರ್ಣಸಂಕರ ಮಾಡಿದ ತಪ್ಪಿಗಾಗಿ ಬಿಜ್ಜಳನು ಅವರನ್ನು ಮರಣ ದಂಡನೆಗೆ ಗುರಿಯಾಗಿಸುತ್ತಾನೆ. ಈ ಘಟನೆಯಿಂದ ಶಿವಶರಣರು ರೊಚ್ಚಿಗೇಳುತ್ತಾರೆ. ಅವರಲ್ಲಿ ಮೊಲ್ಲೆಬೊಮ್ಮ ಹಾಗೂ ಜಗದೇವರು ಕೂಡಿಕೊಂಡು ರಾತ್ರಿ ಹೊತ್ತು ಬಿಜ್ಜಳನ ಆಸ್ಥಾನದಲ್ಲಿ ಸಭೆ ನಡೆಯುತ್ತಿದ್ದ ಸಮಯದಲ್ಲಿ ಬಿಜ್ಜಳನ ಮೇಲೆ ಆಕ್ರಮಣ ಮಾಡಿ ಕೊಂದು ಹಾಕುತ್ತಾರೆ. ನಂತರದಲ್ಲಿ ತಾವು ಹತರಾಗುತ್ತಾರೆ. ಇದೆ ವಿಚಾರವನ್ನು ಸಂಶೋಧಕರಾದ ಎಂ. ಚಿದಾನಂದಮೂರ್ತಿಯವರು ತಮ್ಮ ಬಸವಣ್ಣ ಎಂಬ ಪುಸ್ತಕದಲ್ಲಿ ಹೇಳಿದ್ದಾರೆ[೮]. ಎರಡನೆಯದು : ಸರ್ವಾಧಿಕಾರಿ ಮನೋಭಾವನಾಗಿದ್ದ ಬಿಜ್ಜಳ ಮಹಾರಾಜನು ತನ್ನ ತಮ್ಮ ಕರ್ಣದೇವನೊಂದಿಗೆ ಒಪ್ಪಂದ ಮಾಡಿಕೊಂಡಂತೆ ತನ್ನ ಅಧಿಕಾರದ ಅವಧಿಯ ಕೊನೆಗೆ ಬಂದಾಗ ಕರ್ಣದೇವನಿಗೆ ಅಧಿಕಾರವನ್ನು ಕೊಡದೆ ತನ್ನ ಮಗನಾದ ಸೋವಿದೇವನನ್ನು ಸಿಂಹಾಸನದ ಮೇಲೆ ಕುಳ್ಳಿರಿಸುತ್ತಾನೆ. ಇದರಿಂದ ಕುಪಿತನಾದ ಕರ್ಣದೇವನು ಬನವಸೆ ನಾಡಿನ ಸರ್ವಾಧಿಕಾರಿಯಾದ ಕಸಪ್ಪಯ್ಯನೊಂದಿಗೆ ಕೂಡಿಕೊಂಡು ಬಿಜ್ಜಳನನ್ನು ಹತ್ಯೆಗೈಯುತ್ತಾರೆ. ಈ ಅಪವಾದವನ್ನು ಕಲ್ಯಾಣದ ಶಿವಶರಣರ ಮೇಲೆ ಬರುವಂತೆ ಮಾಡುತ್ತಾರೆ. ಮೂರನೆಯ ವಿಚಾರ ಈಗಾಗಲೇ ವಿವರಿಸಿದ ಹಾಗೇ ಜೈನ ಗ್ರಂಥಕಾರರ ಅಭಿಪ್ರಾಯಗಳು. ಈ ಮೂರು ಅಭಿಪ್ರಾಯಗಳನ್ನು ಸಂಗ್ರಹಿಸಿ ನೋಡಿದಾಗ ಬಿಜ್ಜಳ ಮಹರಾಜನ ತಮ್ಮನಾದ ಕರ್ಣದೇವನೇ ಬಿಜ್ಜಳನನ್ನು ಹತ್ಯೆ

ಮಾಡಿರುತ್ತಾನೆ. ಅದು ಬಸವಣ್ಣ ಮತ್ತು ಶಿವಶರಣರ ಮೇಲೆ ಬರಲೆಂದು ಸುಳ್ಳು ಅಪಪ್ರಚಾರ ಮಾಡುತ್ತಾನೆ. ಈ ವಿಷಯಕ್ಕೆ ಸಂಬಂಧಿಸಿದಂತೆ ಎಂ. ಪಿ. ಪಾಟೀಲರು ಒಂದು ನಿದರ್ಶವನ್ನು ಕೊಟ್ಟಿದ್ದಾರೆ. ಅದು ಹೀಗಿದೆ.

'ಬಿಜ್ಜಳನನ್ನು ರಾತ್ರಿ ಹೊತ್ತಿನಲ್ಲಿ ಕೊಲೆ ಮಾಡಿದ ಕೊಲೆಗಡುಕರು ರಾಜ ಬೀದಿಗೆ ಬಂದು, ಬಿಜ್ಜಳನು ಮಧುವರಸ ಹರಳಯ್ಯರನ್ನು ಕೊಂದದ್ದಕ್ಕಾಗಿ ಶಿವಶರಣರು ನಾವು ಅವನನ್ನು ಹತ್ಯೆ ಮಾಡಿದೆವು ಎಂದು ಸುಳ್ಳು ಪ್ರಚಾರ ಮಾಡುತ್ತಾರೆ'. ಈ ವಿಚಾರವನ್ನು ವೀರಶೈವರೆಲ್ಲರೂ ನಂಬಿದ್ದರಿಂದ ಸೋವಿದೇವನು ಇದನ್ನೇ ನಂಬಿಕೊಂಡು ಶರಣರ ಮೇಲೆ ಆಕ್ರಮಣ ಮಾಡಲಿಕ್ಕೆ ಮುಂದಾಗುತ್ತಾನೆ. ಈ ಸಂದರ್ಭದಲ್ಲಿ ಕಲ್ಯಾಣದ ಶಿವಶರಣರೆಲ್ಲರೂ ಸ್ವಾಭಾವಿಕವಾಗಿ ವಲಸೆ ಹೋಗುತ್ತಿದ್ದರಿಂದ ಇದನ್ನೆ ಸತ್ಯವೆಂದು ನಂಬಿದ ಸೋವಿದೇವ ಶರಣರನ್ನು ಶಿಕ್ಷಿಸಲು ಮುಂದಾಗುತ್ತಾನೆ. ಅವನು ಹೀಗೆ ಮಾಡಲು ಕರ್ಣದೇವ ಮತ್ತು ಕಸಪ್ಪಯ್ಯರೆ ಪ್ರಚೋದಿಸಿರುತ್ತಾರೆ. ಶರಣರೆ ಕೊಲೆಗೈದರೆಂದು ಆ ಕಾಲದ ಜನರು ನಿಜವಾದ ಸಂಗತಿ ಎಂದು ನಂಬುತ್ತಾರೆ. ವೀರಶೈವ ಧರ್ಮದ ಮೇಲೆ ಅಪಾರ ಪ್ರೀತಿ ಇದ್ದ ಆ ಕಾಲದ ಪುರಾಣಕರ್ತರು ಬಸವಣ್ಣ ಮತ್ತು ಶಿವಶರಣರು ಕೂಡಿಕೊಂಡು ಬಿಜ್ಜಳನನ್ನು ಕೊಲೆಗೈದರು ಮತ್ತು ಇದು ವೀರಶೈವ ಧರ್ಮದ ಶರಣರಿಂದಾದ ಪ್ರಶಂಸನೀಯ ಕಾರ್ಯವೆಂದು ಇತಿಹಾಸವನ್ನು ಕಟ್ಟಿದ್ದರಿಂದ ಈ ರೀತಿಯ ಅನಾಹುತಗಳು ಘಟಿಸಿರುತ್ತವೆ.

ಬಸವಣ್ಣನವರು ಬಿಜ್ಜಳನ ಕೊಲೆಯಲ್ಲಿ ಪಾತ್ರವಹಿಸಿರಲಿಲ್ಲ ಎಂಬ ಎಂ. ಪಿ. ಪಾಟೀಲರ ವಿಚಾರಕ್ಕೆ ಪೂರಕವೆಂಬಂತೆ ಕರ್ನಾಟಕ ವಿಶ್ವವಿದ್ಯಾಲಯವು ಪ್ರಕಟಿಸಿರುವ ಡಾ; ತಿಪ್ಪೆರುದ್ರಸ್ವಾಮಿಯವರ ಬಸವಣ್ಣನವರ ಜೀವನ ಚಾರಿತ್ರಿಕ ಅಂಶಗಳು ಎಂಬ ಲೇಖನದಲ್ಲಿ ಈ ವಿಷಯಕ್ಕೆ ಸಂಬಂಧಿಸಿದ ಮಹತ್ವದ ವಿಷಯವನ್ನು ಚರ್ಚಿಸಿದ್ದಾರೆ. ಅದು ಹೀಗಿದೆ.

ಪುರಾಣಗಳಲ್ಲಿ ಹೇಳಿರುವ ಕಥೆಯ ಆಧಾರದ ಮೇಲೆ ಬಸವಣ್ಣ ಮತ್ತು ಶಿವಶರಣರು ಕೂಡಿಕೊಂಡು ಬಿಜ್ಜಳನ ಕೊಲೆಗೈದರೆಂದು ಹೇಳುತ್ತಾರೆ. ಆದರೆ ಬಸವಣ್ಣನವರ ವ್ಯಕ್ತಿತ್ವವನ್ನು ಬಲ್ಲವರಿಗೆ ಈ ಹೇಳಿಕೆಯಲ್ಲಿ ಯಾವುದೇ ಹುರುಳಿಲ್ಲವೆಂಬುದು ಸ್ಪಷ್ಟವಾಗುತ್ತದೆ. 'ಕ್ರಿ.ಶ. ೧೧೬೮ ರಲ್ಲಿ ಕೊಲೆ ಆಯಿತೆಂದು ಹೇಳುವ ಚರಿತ್ರಕಾರರು ಅದನ್ನು ಪರಿಶೀಲಿಸಬೇಕಾಗಿದೆ. ಆದರೆ ಈ ಸಂದರ್ಭದಲ್ಲಿ ಬಿಜ್ಜಳನ ಕೊಲೆ ನಡೆದಿದ್ದರೂ ಬಸವಣ್ಣನವರು ಅದಕ್ಕೆ ಕಾರಣರಲ್ಲ ಎಂಬುದಂತೂ ಸ್ಪಷ್ಟ. ಈ ಘಟನೆಯಿಂದ ತಳಮಳಗೊಂಡ ಬಸವಣ್ಣನವರು ಕೂಡಲ ಸಂಗಮಕ್ಕೆ ಹೋಗಿರಬೇಕು. ಇದಕ್ಕೆ ಸಂಬಂಧಿಸಿದ ಯಾವದೇ ಶಾಸನಗಳಿಲ್ಲವಾದರೂ ಅವರ

ಅಂತರಂಗದ ಭಾವನೆಗಳಿಂದ ಮೂಡಿದ ವಚನಗಳೆ ಸಾಕ್ಷಿಯಾಗಿರುತ್ತವೆ. ಇಂಥ ವ್ಯಕ್ತಿತ್ವವುಳ್ಳ ಬಸವಣ್ಣನವರನ್ನು ಕೂಡಲ ಸಂಗಮ ತನಗೆ ಬೇಕೆಂದು ಎತ್ತಿಕೊಂಡು ತನ್ನ ಕೈದುವಾಗಿ ತನ್ನೊಟ್ಟಿಗೆ ವಾಸಿಸುವ ಸಂದರ್ಭದಲ್ಲಿ ಹೇಗೆ ನಡೆದುಕೊಂಡಿರ–ಬಹುದೆಂಬುದನ್ನು ಕಲ್ಲಿನ ಶಾಸನ ನಿರೂಪಿಸುವದಕ್ಕಿಂತಲು ಹೆಚ್ಚಾಗಿ ಅಂತರಂಗದ ಅರಿವು ಮತ್ತು ಪರಿಭಾವನೆಗಳು ತಿಳಿಸಬಲ್ಲ ಆಕಾರಗಳಾಗಿರುತ್ತವೆ"[೧೦].

ಒಟ್ಟಿನಲ್ಲಿ ಬಿಜ್ಜಳನ ಕೊಲೆಯಲ್ಲಿ ಬಸವಣ್ಣನವರ ಪಾತ್ರ ಇರುವುದಿಲ್ಲ. ಎಂ. ಪಿ. ಪಾಟೀಲರ ಈ ವಿಚಾರಗಳು ಅಧ್ಯಯನ ದೃಷ್ಟಿಯಿಂದ ಸಾರ್ಥಕತೆಯನ್ನು ಪಡೆದುಕೊಂಡಿವೆ. ಅದಮ್ಯ ವಿಶ್ವಾಸದೊಂದಿಗೆ, ಆಧಾರದೊಂದಿಗೆ ಬಸವಣ್ಣನವರ ಜೀವನ ಚರಿತ್ರೆಯ ಮೇಲೆ ಹೊಸ ಬೆಳಕು ಚೆಲ್ಲಿ ಕೆಲವು ಸತ್ಯ ಸಂಗತಿಗಳನ್ನು ಜನರಿಗೆ ಮತ್ತು ಬಸವಾಭಿಮಾನಗಳಿಗೆ ಮುಟ್ಟಿಸುವ ಕಾರ್ಯವನ್ನು ಈ ಸಂಶೋಧನಾ ಕೃತಿಯ ಮೂಲಕ ಮಾಡಿರುತ್ತಾರೆ.

**೪.೨ ಲಕುಲೀಶ ಪಾಶುಪಥ ಮತ್ತು ಕಾಳಾಮುಖ ಪಂಥಗಳ ನಿಜ ಸ್ವರೂಪ :**

ಎಂ. ಪಿ. ಪಾಟೀಲರು ತಮ್ಮ ಇನ್ನೊಂದು ಕೃತಿಯಲ್ಲಿ ಪ್ರಾಚೀನ ಭಾರತದ ಶ್ರೇಷ್ಠ ಧರ್ಮವಾದ ಶೈವ ಧರ್ಮದ ಪ್ರಮುಖ ಪಂಥಗಳಾದ ಲಕುಲೀಶ ಪಾಶುಪಥ ಮತ್ತು ಕಾಳಾಮುಖ ಪಂಥಗಳ ನಡುವಿನ ಭಿನ್ನಾಭಿಪ್ರಾಯಗಳನ್ನು ಚರ್ಚಿಸಿದ್ದಾರೆ. ಈ ಲೇಖನದಲ್ಲಿ ಮುಖ್ಯ ವಿಚಾರಗಳು ಹೀಗಿರುತ್ತವೆ. ಲಕುಲೀಶ ಪಾಶುಪತದ ಉಗಮ ಮತ್ತು ಈ ಪಂಥ ಬಾಳಿ ಬದುಕಿದ ಪ್ರದೇಶಗಳನ್ನು ಗುರುತಿಸಿದ್ದಾರೆ. ಕಾಳಾಮುಖ ಪಂಥದ ಉಗಮ ಹಿನ್ನಲೆ ಆಚರಣೆಗಳ ಕುರಿತು ಹೇಳಿದ್ದಾರೆ. ಈ ಎರಡು ಪಂಥಗಳ ವಿಧಿವಿಧಾನಗಳಲ್ಲಿಯ ವ್ಯತ್ಯಾಸಗಳನ್ನು ಹೇಳಿದ್ದಾರೆ. ಈಗಾಗಲೇ ಹೇಳಿದ ವಿದ್ವಾಂಸರ ಮತ್ತು ಸಂಶೋಧಕರ ಅಭಿಪ್ರಾಯಗಳನ್ನು ಆಧಾರ ಸಹಿತವಾಗಿ ಈ ಪಂಥದ ವಿಚಾರಗಳನ್ನು ವಿಶ್ಲೇಷಿಸಿ ವಿಮರ್ಶಿಸಿದ್ದಾರೆ.

ಮೊದಲನೆಯ ಅಧ್ಯಾಯದಲ್ಲಿ ಸನಾತನ ಹಿಂದೂ ಧರ್ಮದ ಪರಿಕಲ್ಪನೆಯನ್ನು ಕೊಟ್ಟಿದ್ದಾರೆ. ಈ ಧರ್ಮದಿಂದ ಇಬ್ಭಾಗವಾಗಿ ಹೋದ ಪಂಗಡಗಳ ಬಗೆಗೆ ಚರ್ಚಿಸಿದ್ದಾರೆ. ಶೈವ ಧರ್ಮದ ಪಂಥಗಳಾದ ಕಾಳಾಮುಖ, ವೀರಮಾಹೇಶ್ವರ, ಶೈವ ಸಿದ್ಧಾಂತ, ಮಹಾತ್ಮ ಬಸವೇಶ್ವರರ ಶಿವಶರಣ ಪಂಥಗಳ ಕುರಿತು ಹೇಳಿದ್ದಾರೆ. ಇವುಗಳಲ್ಲಿ ಮುಖ್ಯ ಪಂಥವಾದ ಕಾಳಾಮುಖದ ನಿಜ ಸ್ವರೂಪವನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ.

**ಹಿನ್ನಲೆ :**

ಕರ್ನಾಟಕದಲ್ಲಿ ವೀರಶೈವ ಧರ್ಮ ಉದಯಿಸುವದಕ್ಕಿಂತ ಪೂರ್ವದಲ್ಲಿ ಸನಾತನ ಹಿಂದೂ ಧರ್ಮದ ಕುಲ ರೂಪವಾದ ಶೈವ ಧರ್ಮ ಪ್ರಚಲಿತದಲ್ಲಿತ್ತು. ಈ ಧರ್ಮಿಯರು ಶಿವನನ್ನೇ ತಮ್ಮ ಆರಾಧ್ಯ ದೈವವನ್ನಾಗಿ ಮಾಡಿಕೊಂಡಿದ್ದರು. ಇವರು ಸಾಂಪ್ರಾದಾಯಿಕ ಆಚರಣೆಗಳ ಮೂಲಕ ಭಕ್ತ ಸಮೂಹವನ್ನು ನಿರ್ಮಾಣ ಮಾಡಿಕೊಂಡಿದ್ದರು. ಮುಂದೆ ಈ ಧರ್ಮಿಯರು ಲಕುಲೀಶಪಾಶಪಥ, ಕಾಪಾಲಿಕರು, ಕಾಳಾಮುಖರು ಎಂದು ಒಡೆದುಹೋದರು. ಅವರಲ್ಲಿ ಕಾಳಾಮುಖ ಪಂಥವು ಪ್ರಸಿದ್ಧಿಯನ್ನು ಹೊಂದುವದರ ಮೂಲಕ ಸಾಮಾಜಿಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಳ್ಳುತ್ತದೆ. ಹಲವು ಮಠಗಳ ನಿರ್ಮಾಣ ಸಂಸ್ಕೃತಿಗೆ ನಾಂದಿ ಹಾಡುತ್ತದೆ.

'ಕಾಳಮುಖ ಪಂಥದ ಉಗಮವು ವರುಣ ಎಂಬ ಪುರಾಣದಲ್ಲಿ ಬ್ರಹ್ಮನು ಶಿವನನ್ನು ಪೂಜಿಸಲೆಂದು ನಾಲ್ಕು ಸಂಪ್ರದಾಯಗಳನ್ನು ನಿರ್ಮಿಸಿ ಪ್ರತಿಯೊಂದಕ್ಕೂ ಒಂದೊಂದು ಶಾಸ್ತ್ರವನ್ನು ನೀಡುತ್ತಾನೆ. ಈ ಸಂಪ್ರದಾಯಗಳನ್ನು ಶೈವ ಪಾಶುಪಥ, ಕಾಲದಮನ, ಕಾಳಾಮುಖ, ತರುವಾಯ, ಕಾಪಾಲಿಕ'[೧೧] ಎಂದು ವಿಭಜಿಸುತ್ತಾನೆ. ಇವುಗಳ ಕಾಲ ಕ್ರಿ.ಶ. ೭ನೇ ಶತಮಾನ. ಈ ಶತಮಾನದಿಂದ ತಮ್ಮ ಯುಗಧರ್ಮವನ್ನು ಆರಂಭಿಸಿದ ಈ ಪಂಥಗಳಲ್ಲಿ ಕಾಳಾಮುಖ ಪಂಥವು ೧೨, ೧೩ ನೇ ಶತಮಾನದಲ್ಲಿ ಬಹಳ ಪ್ರಸಿದ್ಧಿಯನ್ನು ಪಡೆದಿರುತ್ತದೆ. ಕಾಳಾಮುಖವೆಂದು ಹೆಸರು ಬರಲು ಕಾರಣ 'ಹಣೆಗೆ ಕಪ್ಪು ಬಣ್ಣದ ಅಡ್ಡ ಪಟ್ಟಿಗಳನ್ನು ಬಳೆದುಕೋಳ್ಳುವ ಜನಾಂಗದವರು'[೧೨]. ಈ ಕಾಳಾಮುಖ ಪಂಥಗಳಲ್ಲಿ ಎರಡು ಮುಖ್ಯ ಪರಿಷತ್ತುಗಳಿದ್ದವು. ೧) ಶಕ್ತಿ ಪರೀಷೆ ೨) ಸಿಂಹ ಪರೀಷೆ ಎರಡನೇ ಶಾಖೆಯು ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಕಂಡು ಬಂದರೆ. ಮೊದಲನೇ ಶಾಖೆಯು ಮೈಸೂರು, ಧಾರವಾಡ, ಶಿವಮೊಗ್ಗಾ ಬೆಳಗಾವಿ ಹಾಸನ ಜಿಲ್ಲೆಗಳಿಗೆ ಸೀಮಿತ ಗೊಂಡಿರುತ್ತದೆ.

ವೀರಶೈವ ಧರ್ಮದ ಪುನಶ್ಚೇತನ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದ ಈ ಕಾಳಾಮುಖದ ಕುರಿತಾಗಿ ಮಧ್ವಾಚಾರ್ಯ, ರಾಮಾನುಜಾಚಾರ್ಯರಂಥಹ ಪಂಡಿತರು ಕೆಲವು ಗಮನರ್ಹಾವಾದ ಉಲ್ಲೇಖ ಮಾಡಿರುತ್ತಾರೆ. ಅವರು ಈ ಕಾಳಾಮುಖಪಂಥವು ಘೋರ ಕರ್ಮಿಯಾಗಿತ್ತೆಂದು ಹೇಳುತ್ತಾರೆ. ಇದೇ ವಾದವನ್ನು ಸರ್ ಭಾಂಢಾರಕರರಂತಹ ಸಂಶೋಧಕರು ತಮ್ಮ ಕೃತಿಗಳಲ್ಲಿ ಹೇಳಿರುತ್ತಾರೆ. ಇದನ್ನು ಮನಗಂಡು ಎಂ. ಪಿ. ಪಾಟೀಲರು ಶಾಸನಗಳ ಆಧಾರದಿಂದ ಅಧ್ಯಯನ ಮಾಡುತ್ತಾರೆ. ಕಾಳಾಮುಖ ಪಂಥದವರು ಘೋರ ಕರ್ಮಿಗಳಾಗಿದ್ದಿರಲಿಲ್ಲ. ಅವರು

ನೈಷ್ಠಿಕ ಬ್ರಹ್ಮಚಾರಿಗಳು ಹಾಗೂ ಶೀಲ ಸಂಪನ್ನ ತಪೋಧನರಾಗಿದ್ದರು[೧೩]. ಎಂಬ ಅಂಶವನ್ನು ಈ ಕೃತಿಯಲ್ಲಿ ಉದಾಹರಣೆ ಸಹಿತ ವಿಶ್ಲೇಷಣೆ ಮಾಡಿದ್ದಾರೆ.

ಇಗಾಗಲೇ ಕಾಳಾಮುಖ ಪಂತದ ಕುರಿತು ಸಂಶೋಧನೆ ಮಾಡಿದವರಲ್ಲಿ ಎಸ್. ಸಿ. ನಂದಿಮಠ, ಕಪಟರಾಳ ಕೃಷ್ಣಮೂರ್ತಿ ಅವರು ಪ್ರಮುಖರಾಗಿದ್ದಾರೆ. ಕಪಟರಾಳ ಕೃಷ್ಣಮೂರ್ತಿಗಳು ಪ್ರಾಚೀನ ಗ್ರಂಥಗಳು, ಶಾಸನಗಳ ಆಧಾರದಿಂದ ಕರ್ನಾಟಕ "ಲಾಕೂಳ ಶೈವ ಇತಿಹಾಸ" ಎಂಬ ಗ್ರಂಥ ರಚಿಸಿರುತ್ತಾರೆ. ಅದರಲ್ಲಿ ಈ ಪಂಥವು ಶುದ್ಧ, ಸಾತ್ವಿಕ, ಧರ್ಮಾಚರಣೆಯ ಪಂಥವಾಗಿದ್ದಿದ್ದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಆದರೆ ಭಾಂಢಾರಕರರಂತಹ ಸಂಶೋಧಕರಿಗೆ ಈ ಪಂಥದ ಬಗ್ಗೆ ತಪ್ಪು ತಿಳುವಳಿಕೆಗಳು ಉಂಟಾಗಲು ಕಾರಣವೇನು ಎಂಬುದನ್ನು ಎಲ್ಲಿಯೂ ತಿಳಿಸಿರುವುದಿಲ್ಲ. ನಂದಿಮಠರು ಕೂಡಾ ಈ ಪಂಥದ ಬಗ್ಗೆ ಸವಿಸ್ತಾರವಾಗಿ ಹೇಳಿದರೂ ಕೂಡ ಆಚಾರ್ಯದ್ವಯರು ಹಾಗೂ ಭಾಂಢಾರಕರರು ಹೇಳಿದ ವಿಚಾರಗಳನ್ನು ಎಲ್ಲಿಯೂ ಪ್ರಸ್ತಾಪಿಸಿರುವುದಿಲ್ಲ. ಆದ್ದರಿಂದ ಎಂ. ಪಿ. ಪಾಟೀಲರು ಈ ಪಂಥದ ನಿಜಾಂಶವನ್ನು ಅದರ ಸಾದ್ಯಂತ ಸಾದರ ಇತಿಹಾಸವನ್ನು ತಿಳಿಯುವ ದೃಷ್ಟಿಯಿಂದ ಕಾಳಾಮುಖ ಪಂಥದ ನಿಜ ಸ್ವರೂಪವನ್ನು ತಿಳಿಸುವ ಕಾರ್ಯವನ್ನು ಮಾಡಿದ್ದಾರೆ.

ಕಾಳಾಮುಖ ಪಂತದ ಪ್ರಥಮ ಕುರುಹು ಬಾಣವಂಶದ ರಾಜನ ತಾಯಿ 'ರತ್ನಾವಳಿ ಎಂಬುವವಳ ದಾನ ಶಾಸನದಲ್ಲಿ ಕಾಳಮುಖ ಮುನಿಯಾದ ಕಾಲಶಕ್ತಿಯ ಹಾಗೂ ಅವನ ಶಿಷ್ಯ ಈಶ್ವರ ದೇವರ ಉಲ್ಲೇಖವಿರುತ್ತದೆ. ಇದರ ಕಾಲ ಕ್ರಿ.ಶ. ೬೪೦'[೧೪]. ಎಂದು ಉಲ್ಲೇಖಿಸಿದ್ದರಿಂದ ಮೇಲೆ ಹೇಳಿದ ಹಾಗೆ ೭ನೇ ಶತಮಾನದಲ್ಲಿ ಈ ಪಂಥ ಅಸ್ತಿತ್ವದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ. ಈ ಕಾಳಾಮುಖರು ಬಳ್ಳಿಗಾವಿಯ ಪ್ರಸಿದ್ಧ ಕೇದಾರೇಶ್ವರ ದೇವಾಲಯಕ್ಕೆ ಹೊಂದಿಕೊಂಡಿರುವ ಕೋಡಿಮಠವನ್ನು ತಮ್ಮ ಧಾರ್ಮಿಕ ಕಾರ್ಯಗಳ ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡಿದ್ದರು. ಬಳ್ಳಿಗಾವಿಯು ಆ ಕಾಲದಲ್ಲಿ ಪ್ರಸಿದ್ಧ ಆಡಳಿತ ಮತ್ತು ಧಾರ್ಮಿಕ ಕೇಂದ್ರವಾಗಿತ್ತು.

ಬಳ್ಳಿಗಾವಿಯನ್ನು ಧಾರ್ಮಿಕ ಕೇಂದ್ರವನ್ನಾಗಿ ಮಾಡಿಕೊಂಡ ಕಾಳಾಮುಖರು ಶ್ರೇಷ್ಠ ತಪೋನಿಷ್ಠವಾದದ ಮೂಲಕ ಕಡಿಮೆ ಅವಧಿಯಲ್ಲಿಯೇ ಘಣತೆ, ಗೌರವವನ್ನು ಪಡೆದುಕೊಳ್ಳುತ್ತಾರೆ. ಬೌದ್ಧರಿಂದ ಪ್ರಾರಂಭವಾದ ಮಠ ಸಂಸ್ಕೃತಿಯನ್ನು ಶೈವ ಸಂಪ್ರದಾಯದ ಈ ಕಾಳಮುಖರು ಮುಂದುವರೆಸಿಕೊಂಡು ಬಂದಿರುತ್ತಾರೆ. ಈ ಪಂಥವು ಮಠಗಳನ್ನು ಸ್ಥಾಪಿಸಿ ಅದರ ಮೂಲಕ ಆಶ್ರಯ, ಅನ್ನ ಇಲ್ಲದವರಿಗೆ, ದೇಹಾರೋಗ್ಯ ಸರಿ ಇಲ್ಲದಂತಹ ಜನರಿಗೆ ಉಪಚಾರ ಮಾಡುವ

ಮುಖ್ಯ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಇಂಥ ಸಾಮಾಜಿಕ ಕಾರ್ಯವನ್ನು ಕಂಡ ಕಾಳಾಮುಖ ಪಂಥದ ಮಠಗಳಿಗೆ ಆ ಕಾಲದ ರಾಜ-ಮಹಾರಾಜರು, ದಾನ-ದತ್ತಿಗಳನ್ನು ಕೊಟ್ಟ ಉದಾಹರಣೆಯನ್ನು ಎಂ. ಪಿ. ಪಾಟೀಲರು ಉಲ್ಲೇಖಿಸಿದ್ದಾರೆ. ಸರಳ ಜೀವನ ಶೈಲಿ ಭಯಂಕರವಾದ ವಿಧಿ ವೃತದ ಮೂಲಕ ಕಡಿಮೆ ಅವಧಿಯಲ್ಲಿಯೇ ಪ್ರಸಿದ್ಧಿ ಪಡೆದ ಈ ಪಂಥವು ತನ್ನ ದೈತ್ಯ ಶಕ್ತಿಯಿಂದ ಹಲವು ಶಿವದೇವಾಲಯಗಳನ್ನು ಮಠಗಳನ್ನು ಸ್ಥಾಪಿಸುವಷ್ಟರ ಮಟ್ಟಿಗೆ ಪ್ರಸಿದ್ಧಿ ಪಡೆದಿರುತ್ತದೆ. ಒಂದು ಉದಾಹರಣೆಯ ಪ್ರಕಾರ : 'ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕುಪ್ಪತ್ತೂರು ಗ್ರಾಮದ ಶಿಲಾಶಾಸನದಲ್ಲಿ ಅನಂತಕೋಟಿ ಭುವನೇಶ್ವರ ದೇವಾಲಯದ ಅರ್ಚಕ, ಸರ್ವೇಶ್ವರ ಶಕ್ತಿದೇವರೆಂಬ ಕಾಳಾಮುಖ ಮುನಿಗಳು ರಾಜ್ಯಗುರುಗಳಾಗಿದ್ದರಲ್ಲದೇ ೭೭ ಶಿವಾಲಯಗಳಿಗೆ ಅಧಿಪತಿಗಳಾಗಿ-ದ್ದರೆಂದು'[೧೫] ತಿಳಿದುಬರುತ್ತದೆ.

ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಕೊಂಡ ಕರ್ನಾಟಕದ ಶ್ರೇಷ್ಠ ಪರಂಪರೆಗಳಲ್ಲಿ ಒಂದಾದ ಕಾಳಾಮುಖ ಪಂಥದ ಕುರಿತು ಕೆಲ ಸಂಶೋಧಕರು ತಪ್ಪಾಗಿ ಅರ್ಥೈಸಿಕೊಂಡಿರುತ್ತಾರೆ. ಆದ್ದರಿಂದ ಈ ಪಂಥದ ಆಚರಣೆಗಳು, ಪದ್ಧತಿಗಳನ್ನು ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಮುಂದುವರೆದು ಎಂ. ಪಿ. ಪಾಟೀಲರು ಲಕುಲೀಶಪಾಶುಪಥ, ಕಾಳಾಮುಖ ಪಂಥಗಳ ವ್ಯತ್ಯಾಸಗಳನ್ನು ಗುರ್ತಿಸುವ ಕಾರ್ಯವನ್ನು ಪ್ರಸ್ತುತ ಲೇಖನದಲ್ಲಿ ಮಾಡಿದ್ದಾರೆ.

ಹಿಂದು ಧರ್ಮದ ಇತಿಹಾಸದ ಮೇಲೆ ಕಣ್ಣಾಡಿಸಿದಾಗ ಪುರಾಣಗಳ ಆಧಾರದ ಮೇಲೆ ಅದನ್ನು ಕಟ್ಟಿರುವುದು ಕಂಡು ಬರುತ್ತದೆ. ಇಂಥ ಐತಿಹಾಸಿಕ ಆಧಾರಗಳನ್ನು ಮುಂದಿಟ್ಟುಕೊಂಡಾಗ ಸಂಶೋಧಕರು ತಮ್ಮ ಗ್ರಂಥಗಳಲ್ಲಿ ವಿಚಾರಗಳನ್ನು ಉಲ್ಲೇಖಿಸಿರುತ್ತಾರೆ. ಈ ವಿದ್ವಾಂಸರ ವಿಚಾರಗಳನ್ನು ಅಲಕ್ಷಿಸದೇ ಅವರು ಹೇಳಿದ ನಂಬಲಾರ್ಹ ಆಧಾರದಿಂದ ಲಕುಲೀಶಪಾಶುಪಥ ಮತ್ತು ಕಾಳಾಮುಖರು ಯಾರು ಎಂಬುದಕ್ಕೆ ಎಂ. ಪಿ. ಪಾಟೀಲರು ಒಂದು ನಿದರ್ಶನವನ್ನು ಕೊಡುತ್ತಾರೆ. 'ಎರಡನೇ ಶತಮಾನದಲ್ಲಿ ಆಗಿ ಹೋದ ಐತಿಹಾಸಿಕ ವ್ಯಕ್ತಿಯಾದ ಲಕುಲೀಶನು ಪಾಶಪಥ ಪಂಥವನ್ನು ಸ್ಥಾಪಿಸಿ ಅದಕ್ಕೆ ಅವನೇ ಧರ್ಮಗುರು ಆಗಿದ್ದನು. ಅವನು ಸ್ಥಾಪಿಸಿದ ಪಂಥವೇ ಪಾಶುಪಥ ಪಂತವೆಂದು ಪ್ರಸಿದ್ಧಿಯನ್ನು ಪಡೆದಿರುತ್ತದೆ[೧೬]. ಅವನು ತನ್ನನ್ನು ಶಿವನ ಅವತಾರಿಯೆಂದು ಹೇಳಿಕೊಂಡು ಪ್ರಚಾರ ಪಡೆದಿದ್ದನು. ಕಾಳಾಮುಖ ಪಂಥದವರು ಶಿವನ ಅವತಾರಿ ರುದ್ರನನ್ನು ತಮ್ಮ ದೈವಗುರು ಎಂದು ನಂಬಿದ್ದರು. ವೇದಗಳ ಬಗ್ಗೆ ಅಧ್ಯಯನ ಮಾಡಿ ಆ ಮಾರ್ಗದಲ್ಲಿ ತಮ್ಮ ಬದುಕನ್ನು ನಡೆಸುತ್ತಿದ್ದರು. ಹೀಗೆ ಪೌರಾಣಿಕ

ವ್ಯಕ್ತಿಯಾದ ಲಕುಲೀಶ, ಕಾಳಾಮುಖ ಮುಂತಾದ ಇಪ್ಪತೆಂಟು ಶೈವಯೋಗಾ–ಚಾರ್ಯರ ಸಂಪ್ರದಾಯಗಳನ್ನು ಎಂ. ಪಿ. ಪಾಟೀಲರು ಹೆಸರಿಸಿದ್ದಾರೆ. ಲಾಕುಳ ಶೈವ ಅಥವಾ ಕಾಳಾಮುಖ ಪಂಥಗಳ ಒಳಗಿನ ಭೇದವನ್ನು ಅರಿಯದೇ ಹೋದದ್ದರಿಂದ ಭಾಂಢಾರಕರರಂತಹ ಸಂಶೋಧಕರ ಅಭಿಪ್ರಾಯಗಳು ತಪ್ಪಾಗಿರುತ್ತವೆ'.

ಪಾಶುಪಥ ಎನ್ನುವ ಪಂಥವು ಕ್ರಿಪೂ. ೨ ನೇ ಶತಮಾನದಲ್ಲಿ ಉದಯಿಸಿರಲಿಲ್ಲ. ಅದು ಮಹಾಭಾರತದ ಕಾಲದಲ್ಲಿಯೇ ಪ್ರಸಿದ್ಧಿಯನ್ನು ಹೊಂದಿತ್ತು. ಎಂಬುದಕ್ಕೆ ಎಂ. ಪಿ. ಪಾಟೀಲರು ಪುರಾಣಗಳಲ್ಲಿಯ ವಿಚಾರವನ್ನು ಅಧ್ಯಯನಕ್ಕೆ ಎತ್ತಿಕೊಂಡಿರುತ್ತಾರೆ. ಪಾಶುಪಥ ಪಂಥವು ಕ್ರಿಪೂ. ೨ ನೇ ಶತಮಾನದ್ದಲ್ಲ. ಅದು ಕ್ರಿ.ಶ. ೨ನೇ ಶತಮಾನದಲ್ಲಿ ಉದಯಿಸಿತ್ತೆಂದು ಹೇಳಿದ ಸಂಶೋಧಕರ ವಿಚಾರವನ್ನು ಒಪ್ಪಿಕೊಂಡಿದ್ದಾರೆ. ಕ್ರಿ.ಶ. ೨ನೇ ಶತಮಾನದಲ್ಲಿ ಪ್ರಸಿದ್ಧಿ ಹೊಂದಿದ್ದ ಬೌದ್ಧ ಧರ್ಮವನ್ನು ಹಿಮ್ಮೆಟ್ಟಿಸಿದ ಲಕಲೀಶನು ಶೈವ ಪಾಶುಪತ ಪಂಥವನ್ನು ಪ್ರಸಿದ್ಧಿ–ಗೊಳಿಸಿದ್ದರಿಂದ ಜನ ಈತನನ್ನು ಶಿವನ ಅವತಾರಿಯೆಂದು ಭಾವಿಸಿರುತ್ತಾರೆ.

ಎಂ. ಪಿ. ಪಾಟೀಲರು ಈ ವಿಚಾರವಾಗಿ ಹೇಳುತ್ತಾ ಅಲೌಕಿಕ ಪುರುಷರನ್ನು ದೇವರ ಅವತಾರಿಯೆಂದು ಹಿಂದು ಧರ್ಮದಲ್ಲಿ ಕರೆಯುವ ಸಾಕಷ್ಟು ಉಲ್ಲೇಖಗಳಿರುವ ಉದಾಹರಣೆ ನೀಡುತ್ತಾರೆ. ರಾಮ–ಕೃಷ್ಣರು ವಿಷ್ಣುವಿನ ಅವತಾರಿಯಾದಂತೆ ಶಿವನು ಸ್ಮಶಾನದಲ್ಲಿ ಸತ್ತ ಶವದ ಒಳಗಡೆ ಪ್ರವೇಶಿಸಿ ಅದರ ಮೂಲಕ ಹಲವು ಸಾಮಾಜಿಕ ಕಾರ್ಯಗಳನ್ನು ಮಾಡಿ ಪ್ರಸಿದ್ಧಿ ಪಡೆದನು. ಮುಂದೆ ಇವನೇ ಪಾಶುಪಥ ಧರ್ಮದ ಸ್ಥಾಪಕನಾಗಿ ಲಕುಲೀಶನೆಂದು ಪ್ರಸಿದ್ಧಿ ಪಡೆದನು. ಅಂದಿನಿಂದ ಲಕುಲೀಶನನ್ನು ಶಿವನ ಅವತಾರಿಯೆಂದು ಭಾವಿಸಲಾಯಿತು. ಈ 'ಲಕುಲಿಶನು ಅಯೋನಿಜನಾಗಿದ್ದ'[೨೨]. ಸಾಕಷ್ಟು ಪವಾಡಗಳನ್ನು ಮಾಡುವುದರ ಮೂಲಕ ಭೂಮಿಯ ಮೇಲೆ ಪ್ರಸಿದ್ಧಿಯನ್ನು ಪಡೆದಿದ್ದ ಎಂಬುದನ್ನು ಅಧ್ಯಯನದ ಆಧಾರಗಳಿಂದ ಗುರುತಿಸಿದ್ದಾರೆ.

ಪ್ರಾರಂಭದಲ್ಲಿ ಈ ಲಕುಲೀಶ ಮತ್ತು ಕಾಳಾಮುಖ ಪಂಥಗಳು ಒಂದೇ ಆಗಿದ್ದವು. ತರುವಾಯದಲ್ಲಿ ಈ ಪಂಥಗಳ ಅನುಯಾಯಿಗಳಲ್ಲಿ ಮತಭೇದ ಉಂಟಾಗಿದ್ದರಿಂದ ಇವೆರಡೂ ಬೇರೆ ಬೇರೆ ಆದವು ಎಂಬ ಸಂಶೋಧಕರ ವಿಚಾರಗಳನ್ನು ಎಂ. ಪಿ. ಪಾಟೀಲರು ಈ ಕೆಳಗಿನಂತೆ ಚರ್ಚಿಸಿದ್ದಾರೆ. ಲಕುಲೀಶ ಪಾಶುಪಥ ಪಂಥವು ಉತ್ತರ ಭಾರತದಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಹೊಂದಿತ್ತು. ಕಾಳಾಮುಖ ಪಂಥವು ಕರ್ನಾಟಕ ಮತ್ತು ಆಂಧ್ರ ಪ್ರದೇಶದಲ್ಲಿ ಪ್ರಸಿದ್ಧಿಯನ್ನು ಪಡೆದಿತ್ತು. ಪಾಶಪಥ ಪಂಥದವರು ಲಕುಲೀಶನನ್ನು ಶಿವನ ಅವತಾರಿಯೆಂದು

ತಿಳಿದು ಆರಾಧಿಸುತ್ತಿದ್ದರು. ಕಾಳಾಮುಖರು ಶಿವನ ಅವತಾರಿಯಾದ ರುದ್ರದೇವರನ್ನು ತಮ್ಮ ಆರಾಧ್ಯದೇವರೆಂದು ಪೂಜಿಸುತ್ತಿದ್ದರು. ಕಾಳಾಮುಖ ಪಂಥವು ಇಪ್ಪತೆಂಟು ಶಿವಯೋಗಿ ಆಚಾರ್ಯರ ಸಂಪ್ರದಾಯವಾಗಿದ್ದು ಇವರು ನೇರವಾಗಿ ರುದ್ರನನ್ನು ಆರಾಧಿಸುವವರಾಗಿದ್ದರು. ಮೇಲೆ ಹೇಳಿದ ಹಾಗೆ ಕರ್ನಾಟಕ ಮಹಾರಾಷ್ಟ್ರ ಆಂಧ್ರದ ಶ್ರೀಶೈಲ ಮತ್ತು ತಮಿಳುನಾಡಿನಲ್ಲಿ ಕ್ರಿ. ಶ ಏಳನೇಯ ಶತಮಾನದಿಂದ ಹದಿನೈದನೇ ಶತಮಾನದವರೆಗೆ ಈ ಪಂಥದವರು ಬಾಳಿ ಬದುಕಿದ್ದರು. ತರುವಾಯ ಈ ಪಂಥವು ವೀರಶೈವ ಧರ್ಮದಲ್ಲಿ ವಿಲೀನವಾಯಿತು.

ವಿದ್ವಾಂಸರಾದ ರಾಮಾನುಜರು, ಮಧ್ವಚಾರ್ಯರು, ಸಂಶೋಧಕರಾದ ಭಾಂಢಾರಕರರು ಈ ಪಂತಗಳ ಕುರಿತು ಹೇಳುವ ಸಂದರ್ಭದಲ್ಲಿ ಕ್ರಿ.ಶ. ೨ನೇ ಶತಮಾನದಲ್ಲಿ ಆಗಿಹೋದ ಪಂಚಾರ್ಥ ಎಂಬ ಧರ್ಮಗ್ರಂಥ ರಚಿಸಿದ ಐತಿಹಾಸಿಕ ವ್ಯಕ್ತಿ ಲಕುಲೀಶನು ಪಾಶುಪಥ ಪಂಥದ ಧರ್ಮಗುರುವಾಗಿದ್ದನು. ಮತ್ತು ಇಪ್ಪತೆಂಟು ಪೌರಾಣಿಕ ಯೋಗಾಚಾರ್ಯರ ಸಂಪ್ರದಾಯದ ಆರಾಧಕರಾದ ಕಾಳಾಮುಖರು ರುದ್ರ ದೇವನ ಪಂಥದವರಾಗಿದ್ದರು. ಈ ಲಕುಲೀಶ ಪಾಶುಪಥ ಮತ್ತು ಕಾಳಾಮುಖಗಳ ನಡುವಿನ ಭಿನ್ನತೆಯನ್ನು ಅರಿಯದೇ ಹೋದದ್ದರಿಂದ ಕಾಳಾಮುಖ ಪಂತದ ಸ್ವರೂಪದ ಕುರಿತು ಇವರು ಹೇಳಿದ ಅಭಿಪ್ರಾಯಗಳು ತಪ್ಪಾಗಿರುತ್ತವೆ.

ಎಂ. ಪಿ. ಪಾಟೀಲರು ಈ ಎರಡು ಪಂಥಗಳ ಕುರಿತು ವಿಮರ್ಶಾತ್ಮಕ ರೀತಿಯಲ್ಲಿ ಅಧ್ಯಯನ ನಡೆಸಿ ಕಾಳಾಮುಖ ಪಂಥ ಬಾಳಿದ ನೆಲೆಗಳನ್ನು ಗುರುತಿಸಿದ್ದಾರೆ. ಲಕುಲೀಶ ಪಾಶುಪಥ ಮತ್ತು ಕಾಳಾಮುಖ ಪಂಥಗಳ ವ್ಯತ್ಯಾಸವನ್ನು ಈ ಕೃತಿಯಲ್ಲಿ ಹೇಳಿದ್ದಾರೆ. ಕಾಳಾಮುಖ ಪಂಥವು ಕಾಶ್ಮೀರದಲ್ಲಿ ಉದಯಿಸಿತ್ತು ಎಂದು ಹೇಳುವ ವಿದ್ವಾಂಸರ ಅಭಿಪ್ರಾಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅದಕ್ಕೆ ಸಾಕ್ಷಿಸಹಿತ ಆಧಾರಗಳನ್ನು ನೀಡಿದ್ದಾರೆ. ಕಾಳಾಮುಖ ಪಂಥವು ದಕ್ಷಿಣಭಾರತದಲ್ಲಿಯ ಪ್ರಸಿದ್ಧ ಯಾತ್ರಾಸ್ಥಳವಾದ ಶ್ರೀಶೈಲದಲ್ಲಿ ಉಗಮಹೊಂದಿ ಕರ್ನಾಟಕ ಮಹಾರಾಷ್ಟ್ರ ತಮಿಳುನಾಡುಗಳಲ್ಲಿ ಪ್ರಸಿದ್ಧಿ ಹೊಂದಿರುತ್ತದೆ ಎಂಬುದನ್ನು ಅಧ್ಯಯನದ ಆಧಾರದಿಂದ ತಮ್ಮ ಕೃತಿಯಲ್ಲಿ ನಿರೂಪಿಸಿದ್ದಾರೆ. ಎಂ. ಪಿ. ಪಾಟೀಲರು ಕಾಳಾಮುಖ ಪಂಥದ ನಿಜಸ್ವರೂಪದ ಬಗೆಗೆ ಸಂಶೋಧಕರಲ್ಲಿದ್ದ ಭಿನ್ನಾಭಿಪ್ರಾಯಗಳನ್ನು ಈ ಕೃತಿಯ ಮೂಲಕ ದೂರಮಾಡಿದ್ದಾರೆ.

**೪.೩ ವೀರಶೈವ ಧರ್ಮ ಪ್ರವರ್ತಕ ವೀರಭದ್ರ ದೇವರು ದಕ್ಷ ಯಜ್ಞ ಸಂಹಾರಕ ವೀರಭದ್ರನಲ್ಲ:**

ಎಂ. ಪಿ. ಪಾಟೀಲರ ಮತ್ತೊಂದು ಮಹತ್ವದ ಸಂಶೋಧನಾ ಕೃತಿ 'ವೀರಶೈವ ಧರ್ಮ ಪ್ರವರ್ತಕ ವೀರಭದ್ರ ದೇವರು ದಕ್ಷಯಜ್ಞ ಸಂಹಾರಕ ವೀರಭದ್ರನಲ್ಲ'. ಎಂಬುದಾಗಿದೆ. ಅವರು ಈ ವಿಷಯವನ್ನು ಕುರಿತು ಚರ್ಚಿಸುವದಕ್ಕಿಂತ ಮೊದಲೇ ವೀರಭದ್ರ ದೇವರ ಬಗ್ಗೆ ಹಲವು ಚರ್ಚಾಸ್ಪದ ವಿಷಯಗಳು ಹುಟ್ಟಿಕೊಂಡಿದ್ದವು. ಅಂತ ವಿಷಯಗಳನ್ನು ಕುಲಂಕೂಷವಾಗಿ ಪರಿಶೀಲಿಸಿರುತ್ತಾರೆ. ಮುಖ್ಯವಾಗಿ ದಕ್ಷಯಜ್ಞ ಸಂಹಾರ ಮಾಡಿದ ವೀರಭದ್ರ ಮತ್ತು ವೀರಶೈವ ಧರ್ಮದ ಪ್ರವರ್ತಕ ವೀರಭದ್ರ ದೇವರ ನಡುವಿನ ವ್ಯತ್ಯಾಸವನ್ನು ಗುರುತಿಸುವ ಕಾರ್ಯಮಾಡಿದ್ದಾರೆ. ಈ ಅಧ್ಯಯನಕ್ಕೆ ಪೂರಕವಾದ ಆಕರಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ವೀರಭದ್ರ ದೇವರ ಉಗಮ ಮತ್ತು ಭೂಮಿಯ ಮೇಲೆ ಅವರು ಕೈಕೊಂಡ ಮಹತ್ಕಾರ್ಯಗಳನ್ನು ಸಮಗ್ರವಾಗಿ ವಿಶ್ಲೇಷಿಸಿದ್ದಾರೆ.

ಎಂ. ಪಿ. ಪಾಟೀಲರು ತಮ್ಮ ಜೀವಿತದ ಕೊನೆಯ ದಿನಗಳಲ್ಲಿ ಎರಡೂ ಕಾಲುಗಳನ್ನು ಕಳೆದುಕೊಂಡು ಜೀವನದ ಎಲ್ಲ ವ್ಯವಹಾರಗಳಿಂದ ದೂರ ಉಳಿದು ಧರ್ಮ ಆಧ್ಯಾತ್ಮಿಕ ವಿಷಯಗಳ ಕುರಿತು ಅಧ್ಯಯನ ಕೈಕೊಳ್ಳುವ ಇಚ್ಛೆಯನ್ನು ಹೊಂದುತ್ತಾರೆ. ಆದರಂತೆ ಬಸವಣ್ಣ ಮತ್ತು ಲಾಕುಳಶೈವ ಪಂಥಗಳ ಅಧ್ಯಯನ ಮಾಡಿದ್ದು ಈಗಾಗಲೇ ತಿಳಿಯುತ್ತದೆ. ಮೇಲೆ ಹೇಳಿದ ಹಾಗೆ ಧರ್ಮದ ಹಾಗೂ ಆಧ್ಯಾತ್ಮಿಕ ವಿಷಯಗಳಿಗೆ ಸಂಬಂಧಪಟ್ಟಂತಹ ಗ್ರಂಥಗಳನ್ನು ತರಿಸಿ ಓದಿಕೊಳ್ಳುತ್ತಿರುವ ಸಂದರ್ಭದಲ್ಲಿ ಮಲ್ಲನಗೌಡರು ಮಾಹೇಶ್ವರ ಪಂಥದ ವೀರಗೋತ್ರದ ಮೂಲಪುರುಷರಾದ ವೀರಭದ್ರನ ಬಗೆಗೆ ತಿಳಿದುಕೊಳ್ಳುವ ಹಂಬಲವನ್ನು ವ್ಯಕ್ತಪಡಿಸುತ್ತಾರೆ. ಆ ನಿಟ್ಟನಲ್ಲಿ ಪುರಾಣಗಳಲ್ಲಿ ಬಂದಂತಹ ದಕ್ಷನಯಜ್ಞ ಸಂಹಾರದ ಕಥೆಯನ್ನು ಓದಿಕೊಳ್ಳುತ್ತಾರೆ. ಈ ವೀರಭದ್ರನೇ ದಕ್ಷನ ಯಜ್ಞ ಸಂಹಾರವನ್ನು ನಾಶಮಾಡಿದ್ದನೆಂಬ ವಿಚಾರವನ್ನು ಇತಿಹಾಸದಲ್ಲಿ ಬಿಂಬಿಸಲಾಗಿರುತ್ತದೆ. ಇದನ್ನೇ ವೀರಶೈವ ಧರ್ಮಿಯರು ನಂಬಿರುತ್ತಾರೆ. ಪರಿಣಾಮವಾಗಿ ಹಲವು ಪುರಾಣಗಳನ್ನು ಮುಖ್ಯವಾಗಿಟ್ಟುಕೊಂಡು ವೀರಶೈವ ಧರ್ಮಿಯರು ನಂಬಿದ್ದ ವೀರಭದ್ರ ದೇವರು ದಕ್ಷನ ಯಜ್ಞವನ್ನು ಸಂಹಾರ ಮಾಡಿರುವದಿಲ್ಲ ಎಂಬುದನ್ನು ಸಂಗತಿಗಳ ಮೂಲಕ ನಿರೂಪಿಸುತ್ತಾರೆ. ಈ ಕಾರ್ಯಕ್ಕಾಗಿ ಆಕರಗಳ ಸಂಗ್ರಹದಲ್ಲಿ ತಮ್ಮನ್ನು ತೊಡಗಿಸಿಕೊಂಡ ಎಂ. ಪಿ. ಪಾಟೀಲರು ಹಲವು ಸ್ನೇಹಿತರನ್ನು ಬಂಧುಗಳನ್ನು ಸಂಪರ್ಕಿಸಿ ಬೇಕಾದ ಗ್ರಂಥಗಳನ್ನು ತರಿಸಿಕೊಂಡು ಅಧ್ಯಯನಕ್ಕೆ ಅಣಿಯಾಗುತ್ತಾರೆ.

ಸ್ಕಂದ ಪುರಾಣದ ಅಧ್ಯಾಯ ೦೭ರಲ್ಲಿಯ ವೀರಭದ್ರ ಮತ್ತು ನಂದಿಕೇಶ್ವರರ ಕುರಿತು ರೂಪಾತ್ಮಕವಾದ ವರ್ಣನೆ ಇರುತ್ತದೆ. ಇದರಲ್ಲಿಯ ವೀರಶೈವ ಧರ್ಮದ ಸತ್ಯಸಂಗತಿಗಳನ್ನು ಪರಿಶೀಲಿಸಿದ್ದಾರೆ. ಈ ಆಧಾರ ಮೇಲಿಂದ ವೀರಭದ್ರ ದೇವರು ಮತ್ತು ನಂದಿಕೇಶ್ವರರು ಐತಿಹಾಸಿಕ ಧರ್ಮಗುರುಗಳಾಗಿದ್ದರು. ಇವರು ವೀರ ಮತ್ತು ನಂದಿಯೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿದ್ದರು ಎಂಬ ವಿಚಾರವನ್ನು ಸ್ಪಷ್ಟಪಡಿಸಿದ್ದಾರೆ. ಇಂತಹ ಸಚ್ಚಾರಿತ್ರವುಳ್ಳ ಪುರುಷರ ವ್ಯಕ್ತಿತ್ವಕ್ಕೆ ಕಳಂಕ ತರುವ ಉದ್ದೇಶದಿಂದ ಪುರಾಣಕರ್ತರು ಶಿವನ ವೈರಿಯಾದ ದಕ್ಷನ ಯಜ್ಞವನ್ನು ಸಂಹಾರಮಾಡಿದ್ದು ವೀರಭದ್ರನೆಂದು ತಮ್ಮ ಪುರಾಣಗಳಲ್ಲಿ ವರ್ಣಿಸಿರುತ್ತಾರೆ. ಅದಕ್ಕೆ ಸಂಬಂಧಿಸಿದಂತೆ ದಕ್ಷಯಜ್ಞ ಸಂಹಾರಕ ವೀರಭದ್ರದೇವರ ವಿಷಯದ ಕುರಿತಾಗಿ ಒಂದು ನಿರ್ದಿಷ್ಟ ವಿಚಾರಕ್ಕೆ ಬಂದು ಆ ವಿಚಾರಗಳನ್ನು ಕೃತಿರೂಪದಲ್ಲಿ ಸಿದ್ಧಪಡಿಸಿದ್ದಾರೆ. ಈ ಕೃತಿಯಲ್ಲಿ ಇನ್ನೂ ಹೆಚ್ಚಿನ ವಿಚಾರಗಳನ್ನು ಸೇರಿಸಬೇಕೆಂಬ ಉದ್ದೇಶದಿಂದ ವೀರಭದ್ರನ ಕುರಿತು ಸಂಶೋಧನೆ ಮಾಡಿದ ಸಂಶೋಧಕರಿಗೆ ತಮ್ಮ ಲೇಖನದ ಪತ್ರಗಳನ್ನು ಕಳಿಸುತ್ತಾರೆ. ಅವರಿಂದ ಬಂದ ವಿಚಾರಗಳನ್ನು ಈ ಕೃತಿಯಲ್ಲಿ ಅಳವಡಿಸಿದ್ದಾರೆ. ಸಂಶೋಧಕರಿಂದ ಬಂದಂತಹ ಅಭಿಪ್ರಾಯಗಳಲ್ಲಿ ಕೆಲವೊಂದು ಭಿನ್ನಾಭಿಪ್ರಾಯಗಳಿರುವುದನ್ನೂ ಗಮನಿಸಿದ್ದಾರೆ. ಅವರಲ್ಲಿ ಸ. ಸ. ಮಾಳವಾಡರು ವೀರಭದ್ರ ದೇವರ ಕುರಿತು ಎರಡು ಪ್ರಶ್ನೆಗಳನ್ನು ಎತ್ತಿರುತ್ತಾರೆ. ಅವು ವೀರಭದ್ರ ದೇವರು ಚಾರಿತ್ರಿಕ ಪುರಷ ಎಂಬುದಕ್ಕೆ ಆಧಾರಗಳೇನು? ಮತ್ತು ಅವರು ಶಿವಯೋಗಿಗಳಾದರೂ ಸುಪ್ರಸಿದ್ಧ ಶಿವಶರಣರ ಮಡಿವಾಳ ಮಾಚಿದೇವರಂತೆ ವೀರವೃತ್ತಿಯವರಾಗಿದ್ದು ದಕ್ಷನ ಯಜ್ಞ ಧ್ವಂಸ ಕಾರ್ಯ ಏಕೆ? ಮಾಡಿರಬಾರದು ಎಂದು. ಸಂಶೋಧಕ ಸ. ಸ. ಮಾಳವಾಡರ ಈ ಎರಡು ಪ್ರಶ್ನೆಗಳನ್ನು ಮುಖ್ಯವಾಗಿಟ್ಟುಕೊಂಡು. ಇನ್ನುಳಿದ ಕೆಲವು ಸಮಸ್ಯೆಗಳನ್ನು ತಮ್ಮ ಲೇಖನದಲ್ಲಿ ಸ್ಪಷ್ಟ ಪಡಿಸಿದ್ದಾರೆ.

ಸ. ಸ. ಮಾಳವಾಡರು ವೀರಭದ್ರ ದೇವರು ಪಂಚ್ಯಾಚಾರ್ಯ ವೀರ ಗೋತ್ರದ ಮೂಲ ಪುರುಷರಾಗಿದ್ದರು ಎಂದು ಹೇಳುತ್ತಾರೆ[೨೭]. ಈ ವಿಚಾರವನ್ನು ಎಂ. ಪಿ. ಪಾಟೀಲರು ಒಪ್ಪಿಕೊಂಡಿದ್ದಾರೆ. ಮಾಳವಾಡ ಅವರು ಬ್ರಾಹ್ಮಣ ಗೋತ್ರದ ಯಾವತ್ತೂ ಮೂಲ ಪುರುಷರು ಋಷಿ ಮುನಿಗಳೇ ಆಗಿದ್ದರು ಎಂಬ ವಿಚಾರವನ್ನು ಪುರಾಣ ಇತಿಹಾಸಗಳಲ್ಲಿ ಕಾಣುತ್ತೇವೆ ಎಂದು ಹೇಳಿರುತ್ತಾರೆ. ಈ ಋಷಿ ಮುನಿಗಳು ತಮ್ಮ ತಪಸ್ಸಿನ ಪ್ರಭಾವದಿಂದ ಶಿವಗಣ ಪದವಿಗೆ ಏರಿರುತ್ತಾರೆ. ಇವರು ಕೇವಲ ಗೋತ್ರಾಧಿಕಾರಿಗಳಾಗಿರದೇ ಶಿವಗಣಗಳಿಂದ ಉದಯಿಸಿದ ಪರಮಪೂಜ್ಯನೀಯ ವ್ಯಕ್ತಿಗಳಾಗಿರುತ್ತಾರೆ. ಇಂತ ಪುಣ್ಯ ಪುರುಷರಲ್ಲಿ ವೀರಭದ್ರ ದೇವರು ಕೂಡ

ಒಬ್ಬರಾಗಿದ್ದಾರೆ. ಅವರೂ ಕೂಡ ವೀರ ಎಂಬ ಗೋತ್ರವನ್ನು ಪ್ರಾರಂಭಿಸಿ ಆ ಪರಂಪರೆಯಲ್ಲಿ ಶ್ರೀ ರೇಣುಕಾಚಾರ್ಯ ಮತ್ತು ಶ್ರೀ ರೇವಣಸಿದ್ದೇಶ್ವರರಂತಹ ಮಹಾನ ತಪಸ್ವಿಗಳಿಗೆ ವೀರಶೈವ ಧರ್ಮದ ಪ್ರಚಾರವನ್ನು ಕೈಗೊಳ್ಳಲು ಹೇಳಿರುತ್ತಾರೆ. ಆ ಪ್ರಕಾರವಾಗಿ ಈ ಇಬ್ಬರು ಪೂಜ್ಯರೂ ಚಿಕ್ಕಮಗಳೂರು ಜಿಲ್ಲೆಯ ಬಾಳೆಹೊಣ್ಣೂರಿನಲ್ಲಿ ಧರ್ಮ (ರಂಭಾಪುರಿ) ಪೀಠವನ್ನು ಸ್ಥಾಪಿಸಿ ವೀರಭದ್ರನನ್ನು ತಮ್ಮ ಆರಾಧ್ಯ ದೈವವೆಂದು ಪೂಜಿಸಲ್ಪಟ್ಟಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ವೀರಭದ್ರ ದೇವರು ಪುರಾಣ ಕಾಲದ ಒಬ್ಬ ಪುಣ್ಯ ಪುರುಷರಾಗಿದ್ದರು ಎಂದು ಎಂ. ಪಿ. ಪಾಟೀಲರು ವಾದಿಸಿದ್ದಾರೆ. ಇದೇ ವಾದವನ್ನು ಶ್ರೇಷ್ಠ ಸಂಶೋಧಕರಾದ ಟಿ. ಎಸ್. ಮಲ್ಲಪ್ಪಾ ಮತ್ತು ಜ. ಚ. ನಿಯವರು ಒಪ್ಪಿಕೊಂಡು ಈ ಕೃತಿಯ ಬಗೆಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿರುತ್ತಾರೆ. ಅವುಗಳನ್ನು ಈ ಕೃತಿಯ ಕೊನೆಯಲ್ಲಿ ಚರ್ಚಿಸಲಾಗಿದೆ.

ಸ. ಸ. ಮಾಳವಾಡರು ಎತ್ತಿರುವ ಎರಡನೇ ಸಮಸ್ಯೆಯಾದ ವೀರಭದ್ರ ದೇವರು ಕ್ಷಾತ್ರವೃತ್ತಿಯ ವ್ಯಕ್ತಿತ್ವವುಳ್ಳವರಾಗಿದ್ದರು ಎಂಬುದನ್ನು ಅಲ್ಲಗಳೆಯಲು ಎಂ. ಪಿ. ಪಾಟೀಲರು ಕೆಲವು ಸಿದ್ಧಾಂತಗಳನ್ನು ಆಧರಿಸಿ ಈ ಅಧ್ಯಯನ ಕೈಗೊಂಡಿದ್ದಾರೆ.

ಪ್ರಾಚೀನ ಭಾರತದಲ್ಲಿ ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳನ್ನು ಕಾಣುತ್ತೇವೆ. ಈ ಎರಡು ಸಂಸ್ಕೃತಿಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವುದಕ್ಕಾಗಿ ಪರಸ್ಪರ ಹೋರಾಡುತ್ತಿದ್ದರು. ಆರ್ಯರಿಗೆ ಪ್ರಿಯ ಕಾರ್ಯವಾದ ಯಜ್ಞ ಸಂಸ್ಕೃತಿಯನ್ನು ದ್ರಾವಿಡರು ನಾಶಮಾಡುತ್ತಿದ್ದರು ಎಂಬ ಪುರಾಣದ ಆಧಾರದ ಮೇಲೆ ದ್ರಾವಿಡರನ್ನು ಯಜ್ಞ ವಿರೋಧಿಗಳೆಂದು ಇತಿಹಾಸದಲ್ಲಿ ಬಿಂಬಿಸಲಾಗಿರುತ್ತದೆ. ಆದರೆ ದ್ರಾವಿಡರು ಆರ್ಯರ ಮೇಲೆ ಮಾಡಿದ ಹೋರಾಟ ಯಜ್ಞವನ್ನು ನಾಶಮಾಡುವದಾಗಿರಲಿಲ್ಲ. ಸಂಪತ್ತಿನ ಆಕ್ರಮಣದ ಹಿನ್ನಲೆಯಲ್ಲಿ ನಡೆಯುತ್ತಿದ್ದ ಹೋರಾಟದಲ್ಲಿ ಅಕಸ್ಮಾತಾಗಿ ಯಜ್ಞ ನಡೆಯುವ ಪ್ರದೇಶಗಳು ಹಾನಿಗೊಳ್ಳುತ್ತಿವು. ಇದನ್ನೇ ಸತ್ಯ ಸಂಗತಿಯೆಂದು ಈ ಅಪವಾದವನ್ನು ದ್ರಾವಿಡರ ಮೇಲೆ ಹೊರಿಸಲಾಗಿರುತ್ತದೆ. ನಂತರದಲ್ಲಿ ಈ ಎರಡೂ ಸಂಸ್ಕೃತಿಗಳ ಮಧ್ಯೆ ಉತ್ತಮ ಬಾಂಧವ್ಯಗಳು ಏರ್ಪಟ್ಟಿದ್ದರಿಂದ ಆರ್ಯರಲ್ಲಿಯ ಯಜ್ಞ ಸಂಸ್ಕೃತಿಯು ತನ್ನಷ್ಟಕ್ಕೆ ತಾನೆ ಮಾಯವಾಗಿತ್ತೆಂದು ಎಂ. ಪಿ. ಪಾಟೀಲರು ಸ್ಪಷ್ಟಪಡಿಸಿದ್ದಾರೆ. ಇದಕ್ಕೆ ಸಂಬಂಧಿಸಿದ ಸ್ಕಂದ ಪುರಾಣದ ಅಧ್ಯಾಯಗಳನ್ನು ಆಧಾರವಾಗಿಟ್ಟುಕೊಂಡು ಈ ಎರಡು ಸಂಸ್ಕೃತಿಗಳು ಸಂಗಮವಾದ ಯಜುರ್ವೇದ ಕಾಲದಲ್ಲಿ ವೀರಭದ್ರ ದೇವರು ಹುಟ್ಟಿರುತ್ತಾರೆ. ದ್ರಾವಿಡ ಸಂಸ್ಕೃತಿಯವರಾದ ಈ ವೀರಭದ್ರ ದೇವರು ಯಜ್ಞ ವಿರೋಧಿ ಮತದವರಾಗಿದ್ದರೂ ಕೂಡ ಯಜ್ಞ ನಾಶಮಾಡುವ

ಮನೋಭಾವದವರಾಗಿರಲಿಲ್ಲ ಎಂದು ಎಂ. ಪಿ. ಪಾಟೀಲರು ಮೇಲಿನ ಉಲ್ಲೇಖಗಳ ಆಧಾರದ ಮೇಲಿಂದ ಕೆಲವೊಂದು ಅಭಿಪ್ರಾಯಗಳನ್ನು ಈ ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಈ ಸಂಗತಿಗೆ ರಾಮಾಯಣದಲ್ಲಿ ಬರುವ ರಾಮ ಮತ್ತು ಮಹಾಭಾರತದಲ್ಲಿಯ ಪಾಂಡವರು ಕೂಡಾ ಯಜ್ಞಯಾಗಾದಿಗಳನ್ನು ಕೈಗೊಳ್ಳುತ್ತಿದ್ದರೆಂಬ ಪ್ರಸಂಗವನ್ನು ಹೇಳುತ್ತಾರೆ. ತರುವಾಯದಲ್ಲಿ ದ್ರಾವಿಡ ಮತ್ತು ಆರ್ಯರ ಸಂಗಮದಿಂದಾಗಿ ಈ ಆಚರಣೆ ದೂರವಾಯಿತು. ಯಜ್ಞದ ಬಗೆಗೆ ಜನರಲ್ಲಿದ್ದ ನಂಬಿಕೆಗಳು ಹೇಗೆ ದೂರವಾದವು. ಎಂಬುದಕ್ಕೆ ಒಂದು ಪ್ರಸಂಗವನ್ನು ನೀಡಿದ್ದಾರೆ. 'ಭಾರ ಶಿವರಾಜ ಎಂಬ ರಾಜನು ಎರಡನೇ ಶತಮಾನದಲ್ಲಿ ಉತ್ತರ ಭಾರತದಲ್ಲಿ ರಾಜವಾಳುತಿದ್ದನು'[೨೯]. ಇವರು ನಿಷ್ಠಾವಂತ ಶಿವಭಕ್ತನಾಗಿದ್ದರಿಂದ ಶಿವನಿಂದಲೇ ತಮಗೆಲ್ಲ ರಾಜಪ್ರಾಪ್ತಿಯಾಗಿತ್ತೆಂದು ಭಾವಿಸಿದ್ದರು. ಇವರು ಸ್ವತಃ ಲಿಂಗಾಧಾರಿಗಳಾಗಿದ್ದರೂ ಕೂಡ ಹತ್ತು ಅಶ್ವಮೇಧ ಯಾಗವನ್ನು ಮಾಡಿರುವದು ಶಾಸನದ ಆಧಾರದಿಂದ ತಿಳಿಯುತ್ತದೆ. ಎಂ. ಪಿ. ಪಾಟೀಲರು ಯಜ್ಞ ಸಂಸ್ಕೃತಿ ಮತ್ತು ಲಿಂಗ ಸಂಸ್ಕೃತಿಯ ಕುರಿತು ಹೇಳುವ ಸಂದರ್ಭದಲ್ಲಿ ಈ ಉದಾಹರಣೆಯನ್ನು ಎತ್ತಿಕೊಂಡು ಉಲ್ಲೇಖಿಸಿದ್ದಾರೆ.

ಜಗಜ್ಯೋತಿ ಬಸವಣ್ಣನವರ ಕಾಲದಲ್ಲಿಯೂ ಇಂತಹ ಯಜ್ಞಕರ್ಮಗಳು ಪ್ರಚಲಿತವಿದ್ದವು ಎಂಬುದನ್ನು ಅವರ ಕೆಲವೊಂದು ವಚನಗಳಲ್ಲಿ ಕಾಣುತ್ತೇವೆ. ಅವರು ಇಂತಹ ಪದ್ಧತಿಯನ್ನು ವಿರೋಧಿಸುತ್ತಿದ್ದರೆ ವಿನಃ ಎಲ್ಲಿಯೂ ಅವುಗಳನ್ನು ಧ್ವಂಸ ಮಾಡಿರುವ ಉಲ್ಲೇಖ ಇರುವದಿಲ್ಲ. ಹಾಗೇಯೇ ವೀರವೃತ್ತಿಯ ಮಡಿವಾಳ ಮಾಚಿದೇವನ ಕುರಿತಾಗಿಯೂ ಯಜ್ಞ ನಾಶಮಾಡಿದ ಉದಾಹರಣೆಗಳು ಎಲ್ಲಿಯೂ ದೊರೆಯುವುದಿಲ್ಲ. ಕೇವಲ ಯಜ್ಞ ವಿರೋಧಿ ಸಂಪ್ರದಾಯದವರೆಂದು ಪುರಾಣಕರ್ತರು ಮಾಡಿದ ಪ್ರಚಾರವನ್ನು ಮುಂದಿಟ್ಟುಕೊಂಡು ಚರ್ಚೆ ಮಾಡಿದ ಸ. ಸ. ಮಾಳವಾಡರ ಅಭಿಪ್ರಾಯವನ್ನು ಎಂ. ಪಿ. ಪಾಟೀಲರು ಅಲ್ಲಗಳೆದಿದ್ದಾರೆ. ಅದಕ್ಕೆ ಸೂಕ್ತವಾದ ಆಧಾರಗಳನ್ನೂ ನೀಡಿದ್ದಾರೆ. ಎಂ. ಪಿ. ಪಾಟೀಲರು ವೀರಭದ್ರ ದೇವರ ವ್ಯಕ್ತಿತ್ವವನ್ನು ಹೀಗೆ ವರ್ಣಿಸಿರುತ್ತಾರೆ. ಮುನಿ ಸಂಪ್ರದಾಯದ ಶಿವಯೋಗಿಗಳು, ಧರ್ಮಗುರುಗಳು ಆದ ವೀರಭದ್ರ ದೇವರು ಶಿವಯೋಗ ಸಾಧನದಿಂದ ಅಹಿಂಸಾ ವೃತವನ್ನು ಕೈಕೊಂಡಿರುತ್ತಾರೆ. ಈ ವೃತವನ್ನು ಯೋಗಿಗಳಾದವರು ಕಾಯಾ, ವಾಚಾ, ಮನಸಾ, ಪರಿಪಾಲಿಸಬೇಕಾಗುತ್ತದೆ. ಇಂತಹ ಶ್ರೇಷ್ಠ ಆಧಾರಕರಾಗಿದ್ದ ವೀರಭದ್ರ ದೇವರು ದಕ್ಷನ ಯಜ್ಞವನ್ನು ನಾಶಮಾಡಿರುವುದಕ್ಕೆ ಸಾಧ್ಯವಿರುವದಿಲ್ಲ. ಅದೇ ರೀತಿ ಮಡಿವಾಳ ಮಾಚಿದೇವನು ಕೂಡ ತನ್ನ ಸ್ವಹಿತರಕ್ಷಣೆಗಾಗಿ ಅಸ್ತ್ರವನ್ನು ಹಿಡಿದವನೇ ವಿನಃ ಅದರ ಹಿಂದೆ ಯಾವ ದುರುದ್ದೇಶವು ಇರಲಿಲ್ಲ. ವೀರಭದ್ರ

ದೇವರ ಕುರಿತು ಕಟ್ಟಿದ ಕಾಲ್ಪನಿಕ ಕಥೆಗಳನ್ನು ಆಧರಿಸಿ ಅವರನ್ನು ಯಜ್ಞ ವಿರೋಧಿ ಸ್ಥಾನದಲ್ಲಿ ನಿಲ್ಲಿಸಲಾಗಿರುತ್ತದೆ. ವೀರಗೋತ್ರದ ಮೂಲ ಪುರುಷನಾದ ವೀರಭದ್ರ ದೇವರು ದಕ್ಷನ ಯಜ್ಞ ಮಾತ್ರವಲ್ಲ ಬೇರೆ ಯಾವುದೇ ರೀತಿಯ ಯಜ್ಞ ಧ್ವಂಸದಂಥ ಕಾರ್ಯಗಳಲ್ಲಿ ತೊಡಗಿಕೊಂಡಿರುವದಿಲ್ಲ. ತಮ್ಮ ಜೀವಿತಾವಧಿಯ ಕಾಲಾವಧಿಯಲ್ಲಿ ಅವರು ವೀರಶೈವ ಧರ್ಮದ ಪ್ರಚಾರಕ್ಕಾಗಿ ದುಡಿದಿರುತ್ತಾರೆ.

ಜನಸಾಮಾನ್ಯರಲ್ಲಿ ಈ ವೀರಭದ್ರ ದೇವರ ಕುರಿತು ತಪ್ಪು ಅಭಿಪ್ರಾಯಗಳು ಉಂಟಾಗಲು ಕಾರಣವೇನು ಎಂಬುದನ್ನು ಹುಡುಕುವ ಪ್ರಯತ್ನವನ್ನು ಎಂ. ಪಿ. ಪಾಟೀಲರು ಪ್ರಸ್ತುತ ಕೃತಿಯಲ್ಲಿ ಮಾಡಿದ್ದಾರೆ. ಅದಕ್ಕೆ ಅವರು ಹೇಳುವ ವಿಷಯ ಹೀಗಿದೆ. ಪುರಾಣಕರ್ತರು ತಮಗೆ ಬೇಕಾದ ರೀತಿಯಲ್ಲಿ ಪುರಾಣಗಳನ್ನು ನಿರ್ಮಿಸಿಕೊಂಡರು. ಅವುಗಳಲ್ಲಿಯ ವಿಷಯವನ್ನು ನೇರವಾಗಿ ಜನಸಾಮಾನ್ಯರಿಗೆ ತಿಳಿಸಿದ್ದರಿಂದ ಅವರೂ ಕೂಡ ಈ ಪುರಾಣದ ಕಥೆಗಳನ್ನೆ ಅನುಸರಿಸಿದ್ದರ ಪರಿಣಾಮವಾಗಿ ಇಂತ ತಪ್ಪು ಅಭಿಪ್ರಾಯಗಳು ಹುಟ್ಟಲಿಕ್ಕೆ ಕಾರಣವಾಯಿತು. ಭಾರತದ ಇತಿಹಾಸದಲ್ಲಿ ನಿರ್ಧಿಷ್ಟ ವಿಷಯ ದೊರೆಯದೇ ಹೋದುದ್ದರಿಂದ ನಮ್ಮ ಪೌರಾಣಿಕರು ಬಾಯಿಮಾತಿನ ಮೂಲಕ ಇತಿಹಾಸವನ್ನು ಕಟ್ಟುವ ಪ್ರಯತ್ನ ಮಾಡಿದ್ದಾರೆ. ಇವರ ಹೆಜ್ಜೆಯಲ್ಲಿಯೆ ನಮ್ಮ ಸಂಶೋಧಕರು ಸಾಗಿದ್ದರಿಂದ ಸಹಜವಾಗಿ ಇಂತ ತಪ್ಪುಗಳು ಘಟಿಸಲಿಕ್ಕೆ ಸಾಧ್ಯವಾಗಿರುತ್ತದೆ. ಅದಕ್ಕೆ ಎಂ. ಪಿ. ಪಾಟೀಲರು ಹನುಮಂತನ ಬಗೆಗೆ ನೀಡಿದ ಉದಾಹರಣೆ ಹೀಗಿದೆ. ಹಣುಮಂತನ ಕುರಿತು ಹೇಳಿರುವ ಪ್ರಸಂಗ ಬಹಳ ಸ್ವಾರಸ್ಯಪೂರ್ಣವಾಗಿದೆ. ರಾಮಾಯಣದ ಕಾಲದಿಂದ ಇಂದಿನವರೆಗೂ ಹಣುಮಂತನನ್ನು ಕಪಿಯೆಂದು ಕರೆಯುವ ರೂಢಿ ಬೆಳೆದು ಬಂದಿರುತ್ತದೆ. ಈ ಸಂಪ್ರದಾಯ ಇಂದಿಗೂ ಮುಂದುವರೆದುಕೊಂಡು ಬಂದಿರುತ್ತದೆ. ಹಾಗೇಯೇ ಸಾತ್ವಿಕ ವ್ಯಕ್ತಿ ವೀರಭದ್ರ ದೇವರ ಇತಿಹಾಸವನ್ನು ಕಾಲ್ಪನಿಕ ಕಥೆಗಳ ಮೂಲಕ ದಕ್ಷನಯಜ್ಞ ಸಂಹಾರಿಯೆಂದು ವರ್ಣಿಸಿದ್ದರಿಂದ ಜನರು ಅದನ್ನೇ ಮುಂದುವರೆಸಿಕೊಂಡು ಬಂದಿರುವುದರಲ್ಲಿ ಆಶ್ಚರ್ಯವೇನಿಲ್ಲ. ಹಿಂದಿನವರ ಕಲ್ಪಿತ ಕಥೆಗಳ ಆಧಾರದ ಮೇಲೆ ವೀರಭದ್ರದೇವರ ಮೂರ್ತಿಯನ್ನು ಸಶಸ್ತ್ರ ಧಾರಿಯಾಗಿ ಚಿತ್ರಿಸಿದ್ದರಿಂದ ಅದು ಇನ್ನಷ್ಟು ಅನಾಹುತಗಳಿಗೆ ಎಡೆಮಾಡಿಕೊಟ್ಟಿರುತ್ತದೆ. 'ಕೋಲಾರ ಜಿಲ್ಲೆಯ ಗುಳೂರುನಲ್ಲಿರುವ ಶ್ರೀ ಜ. ಚ. ನಿ. ಯವರ ಶ್ರೀಶೈಲ ನಿಡುಮಾಮಿಡಿ ಧರ್ಮಪೀಠ[೨೦] ಮಠದಲ್ಲಿ ವೀರಭದ್ರದೇವರ ಮೂರ್ತಿ ಇರುವುದನ್ನು ಕೆ. ರಾಮಚಂದ್ರ ಎನ್ನುವ ಶಿಲ್ಪ ತಜ್ಞರು ಪತ್ತೆ ಹಚ್ಚಿರುತ್ತಾರೆ. ಈ ಮೂರ್ತಿಯ ಕುರಿತಾಗಿ ತಮ್ಮ ಅಭಿಪ್ರಾಯವನ್ನು ಶ್ರೀಶೈಲ ಪೀಠ ದರ್ಶನ ಎಂಬ ಗ್ರಂಥದಲ್ಲಿ ಪ್ರಕಟಿಸಿರುತ್ತಾರೆ. ಮಠದ ಹಿಂದಿರುವ ಬೋರು ಬಂಡೆಯ ಒಂದು

ಗವಿಯಲ್ಲಿ ಅಸ್ಪಷ್ಟ ಮೂರ್ತಿ ಇರುತ್ತದೆ. ಮಠದವರು ಈ ಮೂರ್ತಿಗೆ ಗುಂಡು ವೀರಭದ್ರನೆಂದು ಕರೆಯುತ್ತಾರೆ. ಎರಡು ಕೈಗಳು ಆಭರಣ, ಅಲಂಕಾರವಿಲ್ಲದ ನಿ:ಶಸ್ತ್ರಧಾರಿಯಾದ ವೀರಭದ್ರನ ಮೂರ್ತಿ ಇರುವುದನ್ನು ಗುರುತಿಸಿದ್ದಾರೆ. ಯತಿಯಂತೆ ತಲೆ ಮುಂಡಿತವಾದ ನಿ:ಶಸ್ತ್ರಧಾರಿಯಾದ ಈ ವೀರಭದ್ರ ದೇವರ ಮೂರ್ತಿಯ ಸ್ವರೂಪವು ಆ ಕಾಲದ ಜನರ ಭಕ್ತಿಯ ಪರಾಕಾಷ್ಠೆಯನ್ನು ತಿಳಿಸುತ್ತದೆ. ಈ ವಿಚಾರ ಮತ್ತು ಎಂ. ಪಿ. ಪಾಟೀಲರು ಹೇಳಿದ ವಿಚಾರ ಪರಸ್ಪರ ಪೂರಕವಾಗಿರುತ್ತವೆ. ಆದ್ದರಿಂದ ವೀರಭದ್ರ ದೇವರು ಬದುಕಿದ ಕೆಲವು ದಶಕಗಳ ನಂತರದಲ್ಲಿ ಪುರಾಣ ಪುರುಷರು ಅವರ ಕುರಿತಾಗಿ ಕಲ್ಪಿತ ಕಥೆಗಳನ್ನು ಕಟ್ಟಿದ್ದರಿಂದ ಅವರ ಇತಿಹಾಸದಲ್ಲಿ ಈ ರೀತಿಯ ಏರುಪೇರುಗಳು ಉಂಟಾಗಲು ಸಾಧ್ಯವಾಯಿತೆಂದು ಹೇಳಲಾಗಿದೆ.

ಶ್ರೀ ಗಂಗಾಧರ ರಾಜಯೋಗಿಂದ್ರ ಮಹಾಸ್ವಾಮಿಗಳು ಮೂರು ಸಾವಿರ ಮಠ ಹುಬ್ಬಳ್ಳಿ ಇವರು ಈ ಕೃತಿಯ ಆರಂಭಕ್ಕೆ ಮುನ್ನುಡಿ ಬರೆದಿರುತ್ತಾರೆ. ಆ ಮುನ್ನುಡಿಯಲ್ಲಿ ಅವರು. ವೀರಶೈವ ಧರ್ಮದ ಪ್ರಚಾರ ಮತ್ತು ಅದರ ಶ್ರೇಷ್ಠತೆಯನ್ನು ಸಮಾಜಕ್ಕೆ ತಿಳಿಯ ಪಡಿಸುವ ಉದ್ದೇಶದಿಂದ ಎಂ. ಪಿ. ಪಾಟೀಲರು ಮಾಡಿರುವ ಕಾರ್ಯ ನಿಜಕ್ಕೂ ಅದ್ಭುತವಾಗಿದೆ. ಸಂಶೋಧನೆಯ ಸಾಗರದಲ್ಲಿ ಮುಳುಗಿದವರಿಗೆ ಇನ್ನೂ ಎಂಥಂತಹ ಮುತ್ತು ರತ್ನಗಳು ದೊರೆಯುತ್ತವೆ[೨೨] ಎಂಬುದನ್ನು ಈ ಒಂದು ಕೃತಿಯ ವಿಚಾರಗಳಿಂದ ತಿಳಿಬಹುದಾಗಿದೆ. ಈ ಕೃತಿಯು ಚಿಕ್ಕದಾದರು ಇದರಲ್ಲಿಯ ತಾತ್ವಿಕ ಹಾಗೂ ಮೌಲ್ಯಯುತವಾದ ವಿಚಾರಗಳು ಬಹಳ ವಿಶಾಲವಾಗಿರುತ್ತವೆ. ಇಂಥ ಕೃತಿಯನ್ನು ಕನ್ನಡ ಸಾಹಿತ್ಯದ ಸಾರಸ್ವತ ಲೋಕಕ್ಕೆ ನೀಡಿ ಅಪೂರ್ಣ ರೂಪದಲ್ಲಿರುವ ಸಾಹಿತ್ಯವನ್ನು ಪೂರ್ಣ ರೂಪದಲ್ಲಿ ಕಟ್ಟಿಕೊಡುವ ಕಾರ್ಯವನ್ನು ಎಂ. ಪಿ. ಪಾಟೀಲರು ಮಾಡಿರುತ್ತಾರೆ ಎಂದು ಹಾರೈಸಿ ಈ ಕೃತಿಗೆ ಮುನ್ನುಡಿಯ ಆಶೀರ್ವಚನ ಬರೆದಿರುತ್ತಾರೆ.

ಎಂ. ಪಿ. ಪಾಟೀಲರು ವೀರಭದ್ರ ದೇವರ ಕುರಿತು ಹೇಳುವ ಸಂದರ್ಭದಲ್ಲಿ ಲಿಂಗದ ಪರಿಕಲ್ಪನೆಯ ಕುರಿತು ಕೆಲವು ವಿಚಾರಗಳನ್ನು ಸ್ಪಷ್ಟಪಡಿಸಿದ್ದಾರೆ. ಕಾರಣ ವೀರಶೈವ ಧರ್ಮಿಯರು ಇಷ್ಟ ಪಡುವ ವಿಧಿವಿಧಾನಗಳಲ್ಲಿ ಲಿಂಗ ಪೂಜಾ ವಿಧಾನವು ಅತ್ಯಂತ ಶ್ರೇಷ್ಠತೆಯನ್ನು ಪಡೆದುಕೊಂಡಿರುತ್ತದೆ. ಪ್ರಾಚೀನ ಲಿಂಗ ಉದ್ಭವದ ವಿಚಾರಗಳನ್ನು ಇಲ್ಲಿ ಹೇಳಿದ್ದಾರೆ.

ಎಂ. ಪಿ. ಪಾಟೀಲರು ಲಿಂಗ ಪೂಜೆಯ ಉಗಮದ ಕುರಿತು ಸಾಂದರ್ಭಿಕ ಅಂಶಗಳನ್ನು ಪ್ರಸ್ತುತ ಲೇಖನದಲ್ಲಿ ಸಂಗ್ರಹಿಸಿದ್ದಾರೆ. ಕ್ರಿಸ್ತಾಬ್ದ ಪೂರ್ವ ೨೫೦೦ ವರ್ಷಗಳ ಹಿಂದೆಯೇ ಭಾರತದ ಸಿಂಧೂ ಕಣಿವೆಯ ನಾಗರಿಕತೆಯಲ್ಲಿ ಲಿಂಗ

ಪೂಜೆ ವಿಧಾನವು ಪ್ರಸಿದ್ಧವಾಗಿತ್ತು. ಅಲ್ಲದೇ ಆರ್ಯರು ಭಾರತವನ್ನು ಪ್ರವೇಶಿಸುವುದಕ್ಕಿಂತ ಮುಂಚೆಯೇ ಭಾರತದ ಪ್ರಾಚೀನ ಕ್ಷೇತ್ರಗಳಾದ ಕಾಶಿ, ಶ್ರೀಶೈಲ, ಪ್ರಭಾಸ, ಮುಂತಾದ ಕ್ಷೇತ್ರಗಳಲ್ಲಿ ಜ್ಯೋತಿರ್ಲಿಂಗಳ ಆರಾಧನೆ ಇರುವುದು ಕಂಡು ಬರುತ್ತದೆ. ಅಲ್ಲದೇ ಈಗಾಗಲೇ ಚರ್ಚಿಸಿದ ಹಾಗೆ ಭಾರತವನ್ನು ಹೊರತು ಪಡಿಸಿ ಇಜಿಪ್ತ, ಬೆಬಿಲೋನಿಯಾ, ಯುರೋಪದಂತಹ ರಾಷ್ಟ್ರಗಳಲ್ಲಿಯೂ ಲಿಂಗ ಪೂಜೆ ವಿಧಾನವು ಬಹಳ ಪ್ರಸಿದ್ಧಿಯನ್ನು ಪಡೆದಿತ್ತು. ಯಜುರ್ವೇದ ಕಾಲದಲ್ಲಿ ಆರ್ಯರು ಕೂಡ ಈ ಪೂಜಾ ವಿಧಾನವನ್ನು ಕೈಕೊಂಡು ಅಲ್ಲಲ್ಲಿ ಲಿಂಗಗಳನ್ನು ಸ್ಥಾಪಿಸಿದ್ದರ ಉಲ್ಲೇಖಗಳಿರುವುದು ಕಂಡು ಬರುತ್ತದೆ. ಲಿಂಗ ಪೂಜಾ ಆರಾಧನೆಯನ್ನು ದ್ರಾವಿಡ ಪಂಥದ ಅರ್ಚಕರು ನಿರ್ವಹಿಸುತ್ತಿದ್ದುದ್ದರಿಂದ ಅವರ ಸಚ್ಚಾರಿತ್ರ್ಯವನ್ನು ಮೆಚ್ಚಿ ಬ್ರಾಹ್ಮಣ ಪಂಥವು ಇವರನ್ನು ತಮ್ಮ ಪಂಥದಲ್ಲಿ ಸೇರಿಸಿಕೊಂಡಿರುತ್ತದೆ. ಈ ದ್ರಾವಿಡ ಅರ್ಚಕರು ವೀರಭದ್ರ ದೇವರನ್ನು ತಮ್ಮ ಗುರುಗಳಾಗಿ ಸ್ವೀಕರಿಸಿದ್ದರಿಂದ ಇತಿಹಾಸದಲ್ಲಿ ಶುದ್ಧಾಚಾರಿಗಳೆಂದು ಪ್ರಸಿದ್ಧಿಹೊಂದಿ ವೀರಭದ್ರಾಂಶರೆಂದು ಸಂಭೋಧಿಸಲ್ಪಟ್ಟಿರುತ್ತಾರೆ.

ದಕ್ಷನ ಯಜ್ಞನಾಶ ಮತ್ತು ವೀರಭದ್ರರ ನಡುವಿನ ಸಮಸ್ಯೆಗಳನ್ನು ಬಿಡಿಸುವ ದೃಷ್ಟಿಯಿಂದ ಎಂ. ಪಿ. ಪಾಟೀಲರು ಯಜ್ಞದ ಪ್ರಮುಖ ಭಾಗವಾದ ಹವಿರ್ಭಾಗದ ಬಗೆಗೆ ಹೇಳಿದ್ದಾರೆ. ಹವಿರ್ಭಾಗದ ಹೋರಾಟದಲ್ಲಿ ವೀರಭದ್ರ ದೇವರ ಪಾತ್ರವನ್ನು ಕೆಲವೊಂದು ಪುರಾಣಗಳಿಂದ ಆಧರಿಸಿ ಹೇಳುತ್ತಾರೆ. ಅಧ್ಯಯನ ದೃಷ್ಟಿಯಿಂದ ಈ ವಿಚಾರಗಳನ್ನು ಸೂಕ್ಷ್ಮವಾಗಿ ಅವಲೋಕಿಸುವುದು ಅವಶ್ಯಕವಾಗಿರುತ್ತದೆ.

ಶಿವ ಪುರಾಣ ಸ್ಕಂದ ಪುರಾಣಗಳಲ್ಲಿಯ ಕಥೆಯನ್ನು ಆಧರಿಸಿ ಯಜ್ಞದಲ್ಲಿ ಶಿವನಿಗೆ ಸಲ್ಲಬೇಕಾದ ಹವಿರ್ಭಾಗವನ್ನು ಕೊಡದೇ ಹೋದ ದಕ್ಷನನ್ನು ಸಂಹಾರ ಮಾಡಿದ ವೀರಭದ್ರ ದೇವರ ಕುರಿತು ಅಪಪ್ರಚಾರಗಳು ಹುಟ್ಟಿರುತ್ತವೆ. ಅವರನ್ನು ಯಜ್ಞ ವಿರೋಧಿಯೆಂದು ಬಿಂಬಿಸಲಾಗಿರುತ್ತದೆ. ವೀರಭದ್ರ ದೇವರು ಹೀಗೆ ಮಾಡಿರಲು ಪ್ರಮುಖ ಕಾರಣವೇನು ಎಂಬುದನ್ನು ತಿಳಿಯಲು ಸ್ಕಂದ ಪುರಾಣದಲ್ಲಿಯ ಕಥೆಯನ್ನು ಎಂ. ಪಿ. ಪಾಟೀಲರು ತಮ್ಮ ಸಂಶೋಧನೆಗೆ ಬಳಸಿಕೊಂಡಿರುತ್ತಾರೆ. ಆ ಕಥೆಯ ಸಾರಾಂಶ ಹೀಗಿದೆ. ದಕ್ಷ ಮಹಾರಾಜನಿಗೆ ಆರವತ್ತು ಜನ ಹೆಣ್ಣುಮಕ್ಕಳಿದ್ದರು. ಅವರಲ್ಲಿ ದಾಕ್ಷಾಯಣಿ ಎಂಬುವವಳನ್ನು ಶಿವನಿಗೆ ವಿವಾಹ ಮಾಡಿಕೊಡಲಾಗಿರುತ್ತದೆ. ಒಂದು ದಿನ ಪ್ರಯಾಗ ಕ್ಷೇತ್ರದಲ್ಲಿ ಎಲ್ಲ ದೇವತೆಗಳ ಮಾರ್ಗದರ್ಶನದಲ್ಲಿ ಯಜ್ಞವನ್ನು ಹಮ್ಮಿಕೊಂಡಿರಲಾಗಿರುತ್ತದೆ. ಈ ಯಜ್ಞ ನಡೆಯುವ ಸಂದರ್ಭದ ಕಾಲಕ್ಕೆ ದಕ್ಷ ಮಹಾರಾಜನು ಅಲ್ಲಿಗೆ ಆಗಮಿಸುತ್ತಾನೆ. ದಕ್ಷ ಮಹಾರಾಜನ ಆಗಮನದ ನಂತರ ಎಲ್ಲಾ ದೇವತೆಗಳು ಎದ್ದು

ನಿಂತು ಭಕ್ತಿಯಿಂದ ಅವನಿಗೆ ನಮಿಸುತ್ತಾರೆ. ಆದರೆ ಅವನ ಅಳಿಯನಾದ ಶಿವನು ವಂದಿಸದೇ ಅಪಮಾನಮಾಡಿತ್ತಾನೆ. ಈ ಸೇಡನ್ನು ತೀರಿಸಿಕೊಳ್ಳಲು ದಕ್ಷನು ಕೂಡ ಒಂದು ದೊಡ್ಡ ಪ್ರಮಾಣದಲ್ಲಿ ಯಜ್ಞ ಮಾಡುವ ನಿರ್ಧಾರ ಮಾಡುತ್ತಾನೆ. ಈ ಸಮಾರಂಭಕ್ಕೆ ದಕ್ಷನು ಶಿವನನ್ನು ಹೊರತುಪಡಿಸಿ ಎಲ್ಲ ದೇವತೆಗಳಿಗೆ ಆಹ್ವಾನ ನೀಡುತ್ತಾನೆ. ಇದರಿಂದ ಕುಪಿತಳಾದ ಮಗಳು ದಾಕ್ಷಾಯಣಿ ಈ ವಿಷಯವನ್ನು ತಂದೆಯ ಬಳಿ ಬಂದು ಪ್ರಶ್ನಿಸಲು ಆಗ ದಕ್ಷನು ತನ್ನ ಮಗಳು ದಾಕ್ಷಾಯಣಿಯನ್ನು ಮತ್ತು ಅಳಿಯ ಶಿವನನ್ನು ಅಪಮಾನ ಗೊಳಿಸುತ್ತಾನೆ. ಇದರಿಂದ ನೊಂದ ದಾಕ್ಷಾಯಣಿಯು ಅಲ್ಲಿಯೇ ಇದ್ದ ಯಜ್ಞಕುಂಡಕ್ಕೆ ಹಾರಿಕೊಂಡು ಆತ್ಮಾರ್ಪಣೆ ಮಾಡಿಕೊಳ್ಳುತ್ತಾಳೆ. ಇದರಿಂದ ಕ್ರೋಧಿತನಾದ ಶಿವನು 'ಕೈಲಾಸ ಪರ್ವತಕ್ಕೆ ಜಡೆ ಬೀಸಿ ವೀರಭದ್ರ ದೇವರನ್ನು ಮತ್ತು ಭದ್ರಕಾಳಿಯರನ್ನು ನಿರ್ಮಾಣ ಮಾಡುತ್ತಾನೆ'[೨೨]. ಇವರು ಶಿವನ ಆಜ್ಞೆಯ ಮೇರೆಗೆ ದಕ್ಷನ ಯಜ್ಞವನ್ನು ಸಂಹಾರ ಮಾಡಿ ಕೆಲವು ದೇವತೆಗಳನ್ನು ಕೊಂದುಹಾಕುತ್ತಾರೆ. ಉಳಿದ ದೇವತೆಗಳು ಶಿವನ ಬಳಿ ಬಂದು ಕ್ಷಮಾಪನೆಯನ್ನು ಕೇಳಿಕೊಂಡು ಯಜ್ಞದ ಹವಿರ್ಭಾಗವನ್ನು ಒಪ್ಪಿಸುತ್ತೇವೆ ಎಂದು ಹೇಳಿದ ಮೇಲೆ ಶಿವನು ಸಂತುಷ್ಟನಾಗುತ್ತಾನೆ. ಇವರೆಲ್ಲರನ್ನು ಕ್ಷಮಿಸುತ್ತಾನೆ.

ಈ ಒಂದು ಪೌರಾಣಿಕ ಕಥೆಯನ್ನು ಆಧರಿಸಿ ಕೆಲ ಸಂಶೋಧಕರು ವೀರಭದ್ರ ದೇವರೇ ದಕ್ಷನನ್ನು ಮತ್ತು ಅವನ ಯಜ್ಞವನ್ನು ಸಂಹಾರ ಮಾಡಿರುವನೆಂದು ನಂಬಿರುತ್ತಾರೆ. ಇಲ್ಲಿ ವೀರಭದ್ರ ದೇವರು ಮಾಡಿದ ಕೆಲಸ ಶಿವನಿಂದೆಯ ಅಪಮಾನದ ಸೇಡನ್ನು ತೀರಿಸಿಕೊಳ್ಳುವದಾಗಿತ್ತು. ಆದರೆ ಈ ಸಮಯದಲ್ಲಿ ಆಕಸ್ಮಾತ್ತಾಗಿ ಯಜ್ಞಗಳು ನಾಶವಾಗಿರುತ್ತವೆ. ವಿನಃ ಬೇಕೆಂತಲೆ ವೀರಭದ್ರ ದೇವರು ಯಜ್ಞದ ಮೇಲೆ ಸಂಹಾರ ಮಾಡಿರುವದಿಲ್ಲ. ಈ ಘಟಣೆಯ ನಂತರ ಎಲ್ಲ ದೇವತೆಗಳು ಹವಿರ್ಭಾಗವನ್ನು ಕೊಡಲು ಒಪ್ಪಿದ್ದರಿಂದ ಸ್ವತಃ ಶಿವನೇ ಮುಂದು ನಿಂತು ಈ ಕಾರ್ಯವನ್ನು ಸಾಂಗಗೊಳಿಸಿದನೆಂದು ಈ ಕಥೆಯಲ್ಲಿ ವಿವರಿಸಲಾಗಿರುತ್ತದೆ. ಎಂ. ಪಿ. ಪಾಟೀಲರು ಹೇಳುವ ಹಾಗೆ ಶೈವ ಧರ್ಮವು ಇಂತಹ ಆಚಾರಣೆಗಳನ್ನು ಮೊದಲಿನಿಂದಲೂ ವಿರೋಧಿಸುತ್ತ ಬಂದಿರುವ ಸಂಗತಿ ಗೊತ್ತಾಗುತ್ತದೆ. ಆದರೆ ಯಜ್ಞನಾಶದಂಥ ಕಾರ್ಯಗಳನ್ನು ಮಾಡಿರುವ ಉದಾಹರಣೆಗಳು ಎಲ್ಲಿಯೂ ದೊರೆತಿರುವುದಿಲ್ಲ. ವಾಯುಸಂಹಿತೆ ಅಧ್ಯಾಯ ೧೮ ರಲ್ಲಿಯೂ ಕೂಡಾ ದಕ್ಷ, ಶಿವ, ದಾಕ್ಷಾಯಣಿ ಮತ್ತು ವೀರಭದ್ರ ದೇವರ ಬಗೆಗೆ ಇದೇ ವಿಚಾರಗಳು ಇರುವುದನ್ನು ಎಂ. ಪಿ. ಪಾಟೀಲರು ಸ್ಪಷ್ಟ ಪಡಿಸಿದ್ದಾರೆ. ಒಟ್ಟಿನಲ್ಲಿ ದಕ್ಷನ ಯಜ್ಞವನ್ನು ನಡೆಸುತ್ತಿರುವ ಸಮಯದಲ್ಲಿ ಶಿವನಿಗೆ ಹವಿರ್ಭಾಗವನ್ನು ಕೊಡಲಿಲ್ಲ ಎಂಬ ಒಂದೇ ಕಾರಣಕ್ಕೆ ವೀರಭದ್ರ ದೇವರ ಬಗೆಗೆ

ಹೀಗೆ ಅಪಪ್ರಚಾರ ಮಾಡಿರಲಿಕ್ಕೆ ಸಾಧ್ಯವಿರುತ್ತದೆ. ಹೊರತಾಗಿ ವೀರಭದ್ರ ದೇವರ ಮುಂದಿನ ಯಾವುದೇ ಚರಿತ್ರೆಯಲ್ಲಿಯೂ ಯಜ್ಞಗಳನ್ನು ನಾಶ ಮಾಡಿದ ಉದಾಹರಣೆಗಳು ಇರುವದಿಲ್ಲ.

ಇಂತಹ ಕಾಲ್ಪನಿಕ ಕಥೆಗಳನ್ನು ಆಧಾರವಾಗಿಟ್ಟುಕೊಂಡು ವೀರಭದ್ರ ದೇವರಂಥಹ ಸಾತ್ವಿಕ ವ್ಯಕ್ತಿಗಳಿಗೆ ಇತಿಹಾಸದಲ್ಲಿ ಆರ್ಯರ ಶತ್ರು ಎಂಬ ಪಟ್ಟವನ್ನು ಕಟ್ಟುವ ಕಾರ್ಯಗಳು ನಡೆದಿರುತ್ತವೆ. ಇದರಲ್ಲಿ ಪುರಾಣಕರ್ತರ ಪಾತ್ರ ಬಹುಪಾಲಿರುತ್ತದೆ. ವೀರಭದ್ರದೇವರು ಶಿವನ ಮೇಲಿನ ವ್ಯಕ್ತಿ ಗೌರವದ ಪಾವಿತ್ರ್ಯತೆಯನ್ನು ಕಾಪಾಡುವ ಉದ್ದೇಶದಿಂದ ಹೀಗೆ ಮಾಡಿರುತ್ತಾರೆ. ಹೊರತು ಅನ್ಯಧರ್ಮಿಯರನ್ನು ಮತ್ತು ಅವರು ಆಚರಿಸುವ ಯಾವುದೇ ಆಚರಣೆಗಳನ್ನು ದ್ವೇಷಿಸುವ ವ್ಯಕ್ತಿತ್ವವನ್ನು ಹೊಂದಿರುವದಿಲ್ಲ. ಇವರು ಸಾತ್ವಿಕ ವ್ಯಕ್ತಿಯ ಮಹಾಶಿವಯೋಗಿಗಳಾದ್ದರೆಂದು ತಿಳಿದು ಬರುತ್ತದೆ.

ಪ್ರಾಚೀನ ಸಾಹಿತ್ಯವನ್ನು ವಿಶ್ಲೇಷಿಸಿದಾಗ ಯಜ್ಞದಲ್ಲಿ ಶಿವನಿಗೆ ಹವಿರ್ಭಾಗವನ್ನು ಕೊಡುವ ಕಲಿಯಾಗಿ ಹೋರಾಡಿದ ಮತ್ತೊಬ್ಬ ವೀರಭದ್ರನು ಇದ್ದಿರಬೇಕು. ಈತನು ವೀರಶೈವ ಧರ್ಮದ ಪಂಚಾಚಾರ್ಯಗೋತ್ರದ ಮೂಲ ಪ್ರವರ್ತಕನಾಗಿದ್ದ ಎಂಬ ಸಂಗತಿಯನ್ನು ವೀರಶೈವ ಸಾಹಿತ್ಯದ ಮುಖೇನ ಗುರುತಿಸಿದ್ದಾರೆ. ಆದ್ದರಿಂದ ಸಾತ್ವಿಕ ವ್ಯಕ್ತಿಯ ವೀರಭದ್ರ ಮತ್ತು ಕ್ಷಾತ್ರವೃತ್ತಿಯ ವೀರಭದ್ರರಲ್ಲಿಯ ವ್ಯತ್ಯಾಸವನ್ನು ಗುರುತಿಸಿ, ವೀರಶೈವ ಧರ್ಮಪ್ರಿಯ ವೀರಭದ್ರದೇವರು ಸಾಧನೆಗಳನ್ನು ಈ ಲೇಖನದಲ್ಲಿ ಹೇಳಿದ್ದಾರೆ. ವೀರಶೈವ ಧರ್ಮಿಯರಿಗೆ ಸಂಪೂಜ್ಯನಾಗಿದ್ದ ವೀರಭದ್ರದೇವರು ಮಹಿಮಾನ್ವಿತ ವ್ಯಕ್ತಿತ್ವವುಳ್ಳ-ವರಾಗಿದ್ದರು. ಮಾಹೇಶ್ವರ ಖಂಡದಲ್ಲಿರುವ ಕೇದಾರ ಖಂಡದ ಏಳನೇ ನೇ ಅಧ್ಯಾಯದಲ್ಲಿ ಹೇಳಲಾಗಿದೆ. ಈ ಸೂತ್ರಗಳ ಆಧಾರದ ಮೇಲೆ ಸಾತ್ವಿಕ ವ್ಯಕ್ತಿಯಾದ ವೀರಭದ್ರ ದೇವರ ಚರಿತ್ರೆಯನ್ನು ಪುನರ್ರೂಪಿಸುವ ಕಾರ್ಯವನ್ನು ಮಾಡಿದ್ದಾರೆ.

ವೀರಶೈವ ಧರ್ಮವನ್ನು ಬೆಳಗಿದ ವೀರಭದ್ರ ದೇವರು ವೀರಶೈವ ಧರ್ಮದ ಮೂಲ ಪ್ರವರ್ತಕರಾಗಿದ್ದರು. ಸಾಕ್ಷಾತ ಶಿವನ ಸ್ವರೂಪಿಯೆಂದು ಪ್ರಸಿದ್ಧಿ ಹೊಂದಿದ್ದರು. ಎಂಬುದು ಕೇದಾರ ಖಂಡದಲ್ಲಿಯ ಉಲ್ಲೇಖದಿಂದ ತಿಳಿದು-ಬರುತ್ತದೆ. ಲಿಂಗ ಪೂಜೆಯ ಪ್ರಥಮ ಪ್ರತಿನಿಧಿಯಾಗಿ ಶಿವನಿಂದ ನೇಮಿಸಲ್ಪಟ್ಟ ವ್ಯಕ್ತಿಯೇ ಈ ವೀರಭದ್ರ ದೇವರು. ಇವರ ಮೂಲಕವೇ ಶಿವನು ಮೂರು ಲೋಕಗಳಲ್ಲಿ ಲಿಂಗ ಪ್ರತಿಷ್ಠಾನದಂತಹ ಕಾರ್ಯಗಳನ್ನು ಮಾಡಿಸಿರುತ್ತಾನೆ. ಈ ಲಿಂಗ ಪೂಜಾವಿಧಾನವು ಹೇಗೆ ಉದಯಿಸಿತು ಎಂಬುದಕ್ಕೆ ಎಂ. ಪಿ. ಪಾಟೀಲ ಒಂದು ಪ್ರಸಂಗವನ್ನು ಕೊಟ್ಟಿದ್ದಾರೆ. ಬ್ರಹ್ಮ ಹಾಗೂ ವಿಷ್ಣುದೇವತೆಗಳಲ್ಲಿ ಶ್ರೇಷ್ಠತೆಯ ಪ್ರಶ್ನೆ

ಬಂದ ಸಂಧರ್ಭದಲ್ಲಿ ಈ ಸಮಸ್ಯೆಯನ್ನು ಬಗೆಹರಿಸಲು ಶಿವನು ಲಿಂಗದ ರೂಪದಲ್ಲಿ ಅವರ ಮಧ್ಯೆ ಉದಯಿಸುತ್ತಾನೆ. ಹೀಗೆ ಉದಯಿಸಿದ ಮಹಾಲಿಂಗದ ಉದ್ಭವದ ಮೂಲ ಮತ್ತು ಅಂತ್ಯವನ್ನು ಕಂಡುಹಿಡಿಯುವಲ್ಲಿ ಈ ಇಬ್ಬರೂ ವಿಫಲರಾಗುತ್ತಾರೆ. ಅವರಲ್ಲಿಯೇ ಒಂದು ವಿಚಾರಕ್ಕೆ ಬಂದು ಶಿವನೇ ನಮ್ಮೆಲ್ಲರಿಗಿಂತ ಶ್ರೇಷ್ಠವೆಂದು ಒಪ್ಪಿಕೊಳ್ಳುತ್ತಾರೆ. ವಿಷ್ಣುವಿನ ನಿರ್ದೇಶನದಂತೆ ಎಲ್ಲ ದೇವತೆಗಳು ಶಿವನ ಬಳಿಗೆ ಬರುತ್ತಾರೆ. ಆಗ ಶಿವನು ವಿಷ್ಣುವಿನ ಕಡೆಗೆ ಹೋಗಲು ಹೇಳಿದಾಗ ದೇವತೆಗಳೆಲ್ಲರು ಹಾಗಯೇ ಮಾಡುತ್ತಾರೆ. ನಮ್ಮೆಲ್ಲರನ್ನು ರಕ್ಷಿಸುವ ಕಾರ್ಯ ನಿನ್ನಿಂದಲೇ ಆಗಬೇಕೆಂದು ವಿಷ್ಣುವಿನ ಬಳಿಗ ಬಂದು ದೇವತೆಗಳು ಪ್ರಾರ್ಥಿಸುತ್ತಾರೆ. ಆಗ ವಿಷ್ಣು 'ಲಿಂಗದೇವರಿಂದ ನಾನು ನಿಮ್ಮನ್ನು ರಕ್ಷಿಸಲಾರೆ'. ಎಂಬ ವಿಷ್ಣುವಿನ ವಾಣಿಗೆ ಚಿಂತಾಕ್ರಾಂತರಾದ ದೇವತೆಗಳೆಲ್ಲರೂ ವಿಸ್ಮಿತರಾಗುತ್ತಾರೆ. ಈ ಸಂದರ್ಭದಲ್ಲಿ ವಿಷ್ಣುವಿನ ಎದುರಿನಲ್ಲಿ ಲಿಂಗ ಪೂಜೆ ಕಾರ್ಯ ನಡೆಯಬೇಕೆಂದು ಆಕಾಶವಾಣಿ ಆಗುತ್ತದೆ. ಈ ಆಕಾಶವಾಣಿಗೆ ತಲೆಬಾಗಿದ ವಿಷ್ಣುವು ಲಿಂಗ ಪೂಜಾ ವಿಧಾನಕ್ಕೆ ಅಣಿಯಾಗುತ್ತಾನೆ. ಆದರೆ ಈ ಲಿಂಗ ಪೂಜಾ ನಿಯಮಗಳು ಗೊತ್ತಿರದೇ ಇದ್ದುದ್ದರಿಂದ ಶಿವ ಹಾಗೂ ಬ್ರಹ್ಮಾದಿ ಸಕಲ ದೇವತೆಗಳಿಗೆ ಸಂಪೂಜ್ಯನಾಗಿರುವ ವೀರಭದ್ರರನ್ನು ಈ ಕಾರ್ಯಕ್ಕಾಗಿ ಪ್ರಾರ್ಥಿಸುತ್ತಾರೆ. ಅದರಂತೆ ಪ್ರತ್ಯಕ್ಷರಾದ ವೀರಭದ್ರದೇವರು ಮಹಾಲಿಂಗದ ರೂಪದಲ್ಲಿ ಉದಯಿಸುತ್ತಾರೆ. ದೇವತೆಗಳಿಂದ ಮೂರು ಲೋಕದಲ್ಲಿ ಪೂಜೆಗೈಯಲ್ಪಡುತ್ತಾರೆ. ಲಿಂಗ ಪೂಜಾ ವಿಧಾನವು ಕಡಿಮೆ ಅವಧಿಯಲ್ಲಿ ಹೆಚ್ಚು ಪ್ರಸಿದ್ಧಿಯನ್ನು ಪಡೆದಿರುವುದರಿಂದ ಅವುಗಳ ಆರಾಧನೆಗೆಂದು ಶಿವನು ವೀರಭದ್ರಾಂಶರನ್ನು ನೇಮಿಸಿ ಅವರಿಗೆ ಸಂಸ್ಕಾರಗಳನ್ನು ತಿಳಿಸಿಕೊಡುತ್ತಾನೆ. ಈ ಗುರುವಿನ ಪುತ್ರರೇ ರುದ್ರ, ವೀರಭದ್ರ ದೇವರು. ಹೀಗೆ ಸಾತ್ವಿಕ ಮನೋಭಾವದ ಪೂಜ್ಯನೀಯ ವ್ಯಕ್ತಿ ವೀರಭದ್ರ ದೇವರು ಹೇಗೆ ಉದಯಿಸಿದರು ಎಂಬುದನ್ನು ಈ ಪ್ರಸಂಗದಲ್ಲಿ ಹೇಳಿದ್ದಾರೆ. ಇದರ ಆಧಾರದ ಮೇಲಿಂದ ಶಿವನರೂಪಿ, ಲಿಂಗಧಾರಿಯಾದ ವೀರಭದ್ರ ದೇವರು ಮತ್ತು ದಕ್ಷನ ಯಜ್ಞ ಸಂಹಾರ ಮಾಡಿದ ವೀರಭದ್ರರು ಬೇರೆ ಬೇರೇ ವ್ಯಕ್ತಿಗಳಾಗಿದ್ದರೆಂದು ಗುರುತಿಸಿದ್ದಾರೆ. ಯಜ್ಞ ವಿರೋಧಿ ಎಂದು ಅಪವಾದ ಹೊತ್ತಿಕೊಂಡಿರುವ ವೀರಭದ್ರ ದೇವರ ಕುರಿತು ಕೆಲವೊಂದು ಉಲ್ಲೇಖಗಳನ್ನು ನೀಡುವುದರ ಮೂಲಕ ಅವರೊಬ್ಬ ಲಿಂಗ ಮಹಿಮಾಧಾರಿ ಎಂಬುದನ್ನು ನಿರೂಪಿಸುವ ಕಾರ್ಯಮಾಡಿದ್ದಾರೆ. ಜೊತೆಗೆ ವೀರಶೈವ ಧರ್ಮ ಪ್ರಿಯ ವೀರಭದ್ರ ದೇವರು ಈ ಧರ್ಮಕ್ಕಾಗಿ ಮಾಡಿರುವ ಸಾಧನೆಗಳನ್ನು ಈ ಕೆಳಗಿನಂತೆ ಚರ್ಚಿಸಿದ್ದಾರೆ.

**ವೀರಭದ್ರ ದೇವರು ಸಾತ್ವಿಕ ವ್ಯಕ್ತಿಯ ಮಹಾಶಿವಯೋಗಿ:**

ಎಂ. ಪಿ. ಪಾಟೀಲರು ವೀರಭದ್ರ ದೇವರ ಕುರಿತು ಆರ್ಯ ಮತ್ತು ದ್ರಾವಿಡ ಸಂಸ್ಕೃತಿಯ ಸಂಗಮಕ್ಕೆ ಕಾರಣವಾದ ಮಹಿಮಾ ಪುರುಷರಾಗಿತ್ತಾರೆ, ಇಂಥ ವ್ಯಕ್ತಿ ದಕ್ಷನ ಯಜ್ಞವನ್ನು ಸಂಹಾರ ಮಾಡಿರಲಿಕ್ಕೆ ಸಾಧ್ಯತೆ ಇರುವದಿಲ್ಲ. ಅವರೊಬ್ಬ ಮಹಾಶಿವಯೋಗಿ ಆಗಿದ್ದರು ಎಂಬ ಪರಿಕಲ್ಪನೆಯನ್ನು ಕೊಟ್ಟಿದ್ದಾರೆ.

ಇದರಿಂದ ವೀರಭದ್ರ ದೇವರು ಶಿವ ರುದ್ರನಷ್ಟೇ ಪವಿತ್ರ ಸ್ಥಾನಮಾನವನ್ನು ಹೊಂದುತ್ತಾರೆ. ಎಂಬ ಅಂಶವನ್ನು 'ಸ್ಕಂದ ಪುರಾಣ ಶ್ಲೋಕ ೨೧ ಮತ್ತು ೨೨' ರಲ್ಲಿಯ ವಿಚಾರಗಳಿಂದ ಗುರುತಿಸಿರುತ್ತಾರೆ[೨೨]. ಶಿವ ರುದ್ರದೇವರಿಗೆ ಪೂಜ್ಯನಾಗುವದರ ಜೊತೆಯಲ್ಲಿಯೇ ವೀರಭದ್ರ ದೇವರು ಎಲ್ಲ ದೇವಾನು-ದೇವತೆಗಳಿಗೆ ಪ್ರಿಯರಾಗುತ್ತಾರೆ. ಆರ್ಯ ದ್ರಾವಿಡ ಸಂಸ್ಕೃತಿಗಳಲ್ಲಿಯ ಅತಿ ಗೌರವಯುಕ್ತ ದೇವಮಾನವರೆಂದು ಪೂಜ್ಯ ಗೈಯಲ್ಪಟ್ಟಿರುತ್ತಾರೆ. ಆ ಕಾಲದ ಶ್ರೇಷ್ಠ ಮಹಾ ತಪಸ್ವಿಯಾಗಿದ್ದ ವೀರಭದ್ರ ದೇವರು ಆರ್ಯ ಮತ್ತು ದ್ರಾವಿಡ ಸಂಸ್ಕೃತಿಗಳನ್ನು ಒಂದುಗೂಡಿಸಿ ನವ ಹಿಂದು ಸಮಾಜದ ಸ್ಥಾಪನೆಗೆ ಅಡಿಪಾಯ ಹಾಕಿಕೊಟ್ಟಿರುತ್ತಾರೆ. ಇಂತಹ ಮಹಾನ ಶಿವಯೋಗಿಯಾದ ವೀರಭದ್ರದೇವರು ಆರ್ಯರ ವೈರಿಯಾಗಿ ದಕ್ಷನ ಯಜ್ಞವನ್ನು ಸಂಹಾರ ಮಾಡಲಿಕ್ಕೆ ಸಾಧ್ಯವಿರುವದಿಲ್ಲ.

ದಕ್ಷ ಮಹಾರಾಜನು ಯಜ್ಞದಲ್ಲಿ ಶಿವನಿಗೆ ಹವಿರ್ಭಾವವನ್ನು ಕೊಡಲಿಲ್ಲ. ಆದ್ದರಿಂದ ಶಿವನು ಹೇಳಿದ ಆಜ್ಞೆಯ ಮೇರೆಗೆ ವೀರಭದ್ರ ದೇವರು ದಕ್ಷನ ಯಜ್ಞವನ್ನು ನಾಶಮಾಡಿದರು. ನಂತರ ಹವಿರ್ಭಾಗವನ್ನು ದೇವತೆಗಳು ಕೊಡಲು ಒಪ್ಪಿದ್ದರಿಂದ ಶಿವ ಸಂತುಷ್ಟನಾದ ಎಂದು ಸ್ಕಂದ ಪುರಾಣದಲ್ಲಿ ಇರುವ ವಿಚಾರವನ್ನು ಎಂ. ಪಿ. ಪಾಟೀಲರು ಈ ರೀತಿ ವ್ಯಾಖ್ಯಾನಿಸಿದ್ದಾರೆ.

ಲಿಂಗ ಪೂಜಾ ಪದ್ಧತಿಯು ದ್ರಾವಿಡರಲ್ಲಿ ಹಾಸಹೊಕ್ಕಾಗಿತ್ತು. ಇವರು ಯಾವತ್ತೂ ಯಜ್ಞದಂತಹ ಆಚರಣೆಗಳನ್ನು ವಿರೋಧಿಸುವ ಮತದವರಾಗಿದ್ದರು. ಆರ್ಯರು ಯಜ್ಞವನ್ನು ಅತಿಯಾಗಿ ಆಚರಿಸುತ್ತಿದ್ದರಿಂದ ದ್ರಾವಿಡರಿಗೂ ಮತ್ತು ಆರ್ಯರಿಗೂ ಸಂಘರ್ಷಗಳು ನಡೆಯುತ್ತಿದ್ದ ಸಂದರ್ಭದಲ್ಲಿ ದ್ರಾವಿಡರು ಇಂತಹ ಪ್ರದೇಶಗಳನ್ನು ನಾಶ ಪಡೆಸಿರುತ್ತಾರೆ. ಅದಕ್ಕೆ ಕಾರಣ ಯಜ್ಞ ಕಾರ್ಯಕೈಕೊಳ್ಳುವದು ಧರ್ಮಬಾಹಿರ ಅದರಿಂದ ಯಾವುದೇ ಪ್ರಯೋಜನವಿರುವದಿಲ್ಲವೆಂದು ದ್ರಾವಿಡರು ಬಲವಾಗಿ ನಂಬಿದ್ದರು. ಹೊರತು ಅದರಿಂದ ದ್ರಾವಿಡರ ಗುರುವಾದ ಶಿವನಿಗೆ ಹವಿರ್ಭಾಗವನ್ನು ಅರ್ಪಿಸಬೇಕೆಂಬ ಯಾವ ದುರುದ್ದೇಶ ಭಾವನೆ ಅವರಲ್ಲಿರಿಲಿಲ್ಲ. ವೀರಭದ್ರ ದೇವರುಕೂಡ ದ್ರಾವಿಡ ಜನಾಂಗದವರಾಗಿದ್ದರಿಂದ ಸಾಮಾನ್ಯವಾಗಿ ಅವರು ಯಜ್ಞ ಸಂಸ್ಕೃತಿಯನ್ನು ನಿರಾಕರಿಸಿರುತ್ತಾರೆ. ಆದರೆ ಇವರ ಉದಯದ

ಕಾಲದಲ್ಲಿ ಅಂದರೆ ಯಜುರ್ವೇದ ಕಾಲದಲ್ಲಿ ಯಜ್ಞ ಸಂಸ್ಕೃತಿಯು ಆರ್ಯರಿಂದಲೇ ದೂರವಾಗುತ್ತ ಬಂದಿತು. ಆರ್ಯರೂ ಕೂಡಾ ಲಿಂಗಪೂಜೆಯಲ್ಲಿ ನಿರತರಾಗಿದ್ದರಿಂದ ಯಜ್ಞ ಸಂಸ್ಕೃತಿಯು ಕ್ರಮೇಣ ಆರ್ಯರಿಂದಲೇ ದೂರವಾಯಿತು. ಹವಿರ್ಭಾಗ ಕೊಡಲಿಲ್ಲವೆಂದು ಶಿವನ ಆಜ್ಞೆಯ ಮೇರೆಗೆ ವೀರಭದ್ರದೇವರು ದಕ್ಷನ ಯಜ್ಞವನ್ನು ನಾಶಮಾಡಿದರೆಂಬ ವಿಚಾರಗಳಿಗಳಲ್ಲಿ ಯಾವುದೇ ಬಲವಾದ ನಂಜಿಕೆಗಳು ಇರುವದಿಲ್ಲ ಎಂಬುದನ್ನು ಎಂ. ಪಿ. ಪಾಟೀಲರು ಈ ಮೇಲಿನ ವಿಚಾರಗಳಿಂದ ಸ್ಪಷ್ಟಪಡಿಸಿದ್ದಾರೆ.

ಸಾಮಾಜಿಕ ಮಹತ್ಕಾರ್ಯಗಳನ್ನು ಗೈಯುತ್ತ ಲಿಂಗಪೂಜೆ ವಿಧಾನಗಳನ್ನು ಜನರಲ್ಲಿ ಮೂಡಿಸಿದ ವೀರಭದ್ರ ದೇವರು ಅಲೌಕಿಕ ಪುರುಷರ ಸಾಲಿನಲ್ಲಿ ನಿಂತುಕೊಳ್ಳುತ್ತಾರೆ. ಏಕೆಂದರೆ ಆರ್ಯ-ದ್ರಾವಿಡರಲ್ಲಿಯ ಯುದ್ಧ ಸಂಸ್ಕೃತಿಯನ್ನು ದೂರಮಾಡಿ ಆಧ್ಯಾತ್ಮಿಕ ಪ್ರೇಮವನ್ನು ಮೂಡಿಸಿರುತ್ತಾರೆ. ಆದ್ದರಿಂದಲೇ ಆ ಕಾಲದ ಸಮಾಜದಲ್ಲಿ ಶಾಂತಿ ಐಕ್ಯತೆಯ ಮಂತ್ರವನ್ನು ಸಾರಿದ ವೀರಭದ್ರ ದೇವರನ್ನು ಜನತೆ ದೇವಾಲಯದಲ್ಲಿಟ್ಟು ಪೂಜಿಸುವ ಕಾರ್ಯಮಾಡಿರುತ್ತಾರೆ. ಅದು ಇವತ್ತಿನವರೆಗೂ ಬೆಳೆದು ಬಂದಿರುತ್ತದೆ.

ಮಹಾಭಾರತದ ಆಖ್ಯಾಯಿಕೆಯಲ್ಲಿ ಯಜ್ಞದ ಹವಿರ್ಭಾಗದ ಕುರಿತಾಗಿ ಕೆಲವು ವಿಚಾರಗಳು ಹೀಗಿರುತ್ತವೆ. ಆರ್ಯರಿಗೆ ಪ್ರಿಯದೇವರಾಗಿದ್ದ ರುದ್ರದೇವರಿಗೆ ದೇವತೆಗಳೆಲ್ಲ ಕೂಡಿಕೊಂಡು ಯಜ್ಞದ ಹವಿರ್ಭಾವಗನ್ನು ಕೊಡಲಿಲ್ಲ. ಈ ಕಾರಣದಿಂದ ರುದ್ರದೇವನು ದೇವತೆಗಳು ಯಜ್ಞ ಮಾಡುತ್ತಿರುವ ಸ್ಥಳಕ್ಕೆ ಹೋಗಿ ತನ್ನ ಬಾಣದಿಂದ ಯಜ್ಞದ ಎದೆಗೆ ಹೊಡಿಯುತ್ತಾನೆ. ಆಗ ಆ ಬಾಣವು ಮೃಗರೂಪತಾಳಿ ಆಕಾಶಕ್ಕೆ ಹೋಗಿ ದೇವತೆಗಳನ್ನು ಘಾಸಿಗೊಳಿಸುತ್ತದೆ. ಇದರಿಂದ ರುದ್ರದೇವನ ಜನಪ್ರಿಯತೆ ಹೆಚ್ಚಾಗಿ ಯಜ್ಞದಲ್ಲಿ ಹವಿರ್ಭಾಗ ಕೊಡಬೇಕೆಂಬ ಒತ್ತಾಯ ಬರುತ್ತದೆ. ಹೀಗೆ ಒತ್ತಾಯಮಾಡಿದವರಲ್ಲಿ ದಕ್ಷಿಣ ಭಾರತದಲ್ಲಿ ಬಂದು ನೆಲೆಸಿದ್ದ ಅಗಸ್ತ್ಯ ಮುನಿಗಳು ಪ್ರಮುಖರೆಂದು ತೋರುತ್ತದೆ. ಈ ಅಗಸ್ತ್ಯಮುನಿಗಳು ಯಜ್ಞದಲ್ಲಿ ಮರುತರಿಗೆ ಹವಿರ್ಭಾಗಕೊಡಬೇಕೆಂದು ವಾದಿಸಿರುತ್ತಾರೆ. ಎಂಬುದು ಅವರೇ ರಚಿಸಿರುವ ಋಗ್ವೇದಲ್ಲಿಯ ಪ್ರಥಮ ಮಂಡಳದ ೧೭೦ನೆಯ ಇಂದ್ರ-ಅಗಸ್ತ್ಯ ಸಂವಾದದಿಂದ ತಿಳಿದುಬರುತ್ತದೆ. ಮುಂದುವರೆದು ಈ ಅಗಸ್ತ್ಯ ಮುನಿಗಳು ರುದ್ರ ದೇವನಿಗೂ ಯಜ್ಞದಲ್ಲಿ ಹವಿರ್ಭಾಗವನ್ನು ಕೊಡಬೇಕೆಂದು ಪ್ರತಿಪಾದಿಸಿದರು ಎಂಬುದಕ್ಕೆ ಐತಿಹಾಸಿಕ ಸಂಗತಿಗಳು ದೊರೆತಿರುತ್ತವೆ.

ರುದ್ರದೇವನ ಪುರಸ್ಕೃತರು ಮತ್ತು ವಿರೋಧಿಗಳ ಮಧ್ಯೆ ವೈಷಮ್ಯಗಳು ಉಂಟಾದ್ದರಿಂದ ರುದ್ರದೇವನ ಪುರಸ್ಕೃತರು ಯಜ್ಞದಲ್ಲಿ ಹವಿರ್ಭಾಗವನ್ನು ಕೊಡುವ

ಪದ್ಧತಿಯನ್ನು ಪ್ರಚಾರದಲ್ಲಿ ತಂದರು. 'ಪುರಾಣದಲ್ಲಿ ವರ್ಣಿತವಾದ ದಕ್ಷಯಜ್ಞ ಸಂಹಾರ ಕಥೆಯು ಇದೆ ಆಖ್ಯಾಯಿಕೆಯನ್ನು ಆಧರಿಸಿ ರೂಪಿತವಾಗಿರುತ್ತದೆ. ತನಗೆ ಯಜ್ಞದಲ್ಲಿ ಹವಿರ್ಭಾಗಕೊಡಬೇಕೆಂದು ಸ್ವತಃ ಮಹಾದೇವನೆ (ರುದ್ರ) ದೇವತೆಗಳೊಡನೆ ಹೋರಾಡಿದನೆಂದು ವರ್ಣಿಸಿದರೆ ಅದು ಅವನ ಶ್ರೇಷ್ಠತೆಗೆ ಕುಂದು ಬರುತ್ತದೆ ಎಂದು ಪುರಾಣಕರ್ತರು ಭಾವಿಸಿ ಮಹಾದೇವನ ಬದಲಾಗಿ ಆಗ ಶಿವಗಣದಲ್ಲಿ ಪ್ರಮುಖನೆಂದು ಪ್ರಸಿದ್ಧಿ ಪಡೆದಿದ್ದ ವೀರಭದ್ರ ದೇವರು ದಕ್ಷನ ಯಜ್ಞವನ್ನು ಸಂಹಾರ ಮಾಡಿದರೆಂದು ಪ್ರಚಾರ ಪಡಿಸಲಾಯಿತು'[೨೪]. ಈ ಪ್ರಬಂಧದ ಪ್ರಾರಂಭದಲ್ಲಿ ವಿವರಿಸಿದಂತೆ ದಾಕ್ಷಾಯಣಿ ಕಥೆಯನ್ನು ಪುರಾಣದಲ್ಲಿ ಮಾರ್ಪಡಿಸಿ ಹೊಸ ಕಥೆಯನ್ನು ಸೃಷ್ಟಿಸಿದ್ದರಿಂದ ವೀರಭದ್ರರ ಮೇಲೆ ಈ ಅಪವಾದ ಬಂದಿರುತ್ತದೆ.

ಎಂ. ಪಿ. ಪಾಟೀಲರು ಉಲ್ಲೇಖಿಸಿರುವ ಈ ಹೇಳಿಕೆಯು ನಿಜಕ್ಕೂ ವೀರಭದ್ರ ದೇವರ ಕುರಿತಾಗಿ ಅಭ್ಯಸಿಸಲು ಉಪಯುಕ್ತವಾದ ಆಕರವಾಗಿರುತ್ತದೆ. ಶಿವನ ವ್ಯಕ್ತಿತ್ವಕ್ಕೆ ಕುಂದುಂಟು. ಮಾಡಬಾರದೆಂಬ ಏಕೈಕ ಉದ್ದೇಶದಿಂದ ಪುರಾಣಕರ್ತರು ಈ ರೀತಿಯಾದ ಕಾಲ್ಪನಿಕ ಕಥೆಯನ್ನು ಹುಟ್ಟುಹಾಕಿದ್ದರಿಂದ ವೀರಭದ್ರ ದೇವರ ಬಗ್ಗೆ ಸಮಗ್ರವಾಗಿ ತಿಳಿದುಕೊಳ್ಳಲು ಅಡ್ಡಿಯಾಗಿರುತ್ತದೆ. ಇಲ್ಲಿಯ ವಿಷಯ ವಿವರಣೆಯು ವೀರಶೈವ ಧರ್ಮಿಯರಿಗೆ ಮತ್ತು ವೀರಭದ್ರ ದೇವರ ಅನುಯಾಯಿಗಳಿಗೆ ನಿಜವಾದ ಸತ್ಯವನ್ನು ಕಂಡುಕೋಳ್ಳಲು ಸಹಾಯಕವಾಗಿರುತ್ತದೆ.

ದಕ್ಷ ಯಜ್ಞ ಸಂಹಾರವು ನಡೆದ ಸ್ಥಳದ ಬಗೆಗೆ ಕೆಲವು ವಿಚಾರಗಳು ವಾದಗ್ರಸ್ಥವಾಗಿ ಉಳಿದಿರುತ್ತವೆ. ಸಂಶೋಧಕರು, ಮತ್ತು ವಿದ್ವಾಂಸರು ದಕ್ಷ ಯಜ್ಞಸಂಹಾರವು ನಡೆದ ಸ್ಥಳಗಳನ್ನು ಗುರುತಿಸಿರುತ್ತಾರೆ. ಎಂ. ಪಿ. ಪಾಟೀಲರು ಅಂತ ಸ್ಥಳಗಳ ಬಗೆಗೆ ಪ್ರಾಯೋಗಿಕ ದೃಷ್ಟಾಂತಗಳನ್ನು ಕೊಡುವುದರ ಮೂಲಕ ಆ ಸ್ಥಳಗಳ ಮಹಿಮೆಯನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ.

ದಕ್ಷಯಜ್ಞ ಸಂಹಾರವು ಪ್ರಯಾಗದ ಹತ್ತಿರವಿರವಿದ್ದ 'ಕಣಖಲ' ಎಂಬ ಪ್ರದೇಶದಲ್ಲಿ ಜರುಗಿತ್ತು. ಎಂದು ವಿದ್ವಾಂಸರು ಹೇಳುತ್ತಾರೆ. ಆದರೆ ಈ ಪ್ರದೇಶದಲ್ಲಿ ವೀರಭದ್ರ ದೇವರ ಕುರಿತು ಯಾವುದೇ ಕುರುಹುಗಳು ದೊರೆಯದೇ ಇದ್ದುದ್ದರಿಂದ ಇವರು ಹೇಳಿರುವ ಹೇಳಿಕೆಗಳು ತಪ್ಪಾಗಿರುತ್ತವೆ. ಎರಡನೆದಾಗಿ ಈ ಘಟನೆಯು ಚಿಕ್ಕೋಡಿ ತಾಲೂಕಿನ ಯಡೂರಿನಲ್ಲಿ ಘಟಿಸಿತೆಂದು ಕೆಲವರು ವಾದಿಸುತ್ತಾರೆ. ಆದರೆ ಈ ದೇವಾಲಯದ ಇತಿಹಾಸವನ್ನು ತೆಗೆದುಕೊಂಡರೆ ರೇವಣಸಿದ್ಧೇಶ್ವರರು ಮತ್ತು ಅವರ ಶಿಷ್ಯರು ಈ ದೇವಾಲಯವನ್ನು ೧೩ನೇ ಶತಮಾನದಲ್ಲಿ ನಿರ್ಮಿಸಿದ್ದರು. ಇದು ಹೆಸರಿಗೆ ಮಾತ್ರ ವೀರಭದ್ರದೇವಾಲಯವೆಂದು ಪ್ರಸಿದ್ಧಿ ಪಡೆದರೂ ಇಲ್ಲಿ

ವೀರಭದ್ರದೇವರ ಮೂರ್ತಿಯ ಬದಲಾಗಿ ಲಿಂಗಾಕೃತಿಯ ದೇವರು ಪೂಜೆಗೊಳ್ಳುತ್ತಿರುವುದರಿಮದ ವಿದ್ವಾಂಸರ ಹೇಳಿದ ಈ ಎರಡೂ ಹೇಳಿಕೆಗಳು ತಪ್ಪಾಗಿರುತ್ತದೆ.

ಈ ಎಲ್ಲ ವಿಚಾರಗಳನ್ನು ಅವಲೋಕಿಸಿದಾಗ ವೀರಭದ್ರನೆಂಬ ವ್ಯಕ್ತಿಯು ದಕ್ಷನ ಯಜ್ಞವನ್ನು ನಾಶಮಾಡಿದ್ದಕ್ಕೆ ಸಾಧ್ಯತೆಗಳಿರುವದಿಲ್ಲ. ಅದಕ್ಕೆ ಯಾವುದೇ ಆಧಾರಗಳು ದೊರೆಯದೆ ಹೋದದ್ದರಿಂದ ಇದು ಕಾಲ್ಪನಿಕ ಕಥೆಯೆಂದು ನಂಬಬಹುದಾಗಿದೆ ವಿನಃ ಇದು ಐತಿಹಾಸಿಕ ಘಟನೆಯಾಗಿರುವದಿಲ್ಲ. ಎಂಬುದನ್ನು ಎಂ. ಪಿ. ಪಾಟೀಲರು ಕೆಲ ವಿಚಾರಗಳ ಮೂಲಕ ಒಪ್ಪಿಕೊಂಡಿದ್ದಾರೆ.

ಹಿಂದೂ ಧರ್ಮದ ಇತಿಹಾಸದ ಪ್ರಕಾರ ಪ್ರತಿಯೊಂದು ಪಂಥವು ಅವರದೇ ಆದ ಪಂಥದ ದೇವತೆಗಳಿಂದಲೇ ಪ್ರಾರಂಭವಾಯಿತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಅದರಲ್ಲಿ ಶೈವ ಧರ್ಮವೂ ಕೂಡ ಇದೇ ರೀತಿಯಲ್ಲಿ ಬೆಳದುಬಂದಿರುತ್ತದೆ. ಈ ವಾದದಲ್ಲಿಯ ನಿಜಾಂಶಗಳನ್ನು ಗಮನಿಸಿದ ಎಂ. ಪಿ. ಪಾಟೀಲರು ಶೈವ ಧರ್ಮವು ಯಾರಿಂದಲೂ ಸ್ಥಾಪಿತವಾಗಿರುವದಿಲ್ಲ. ಅದು ಆದಿಮಾನವರಲ್ಲಿ ಸ್ವಯಂ ಇಚ್ಛೆಯಿಂದ ಉದ್ಭವವಾಗಿರುತ್ತದೆ. ಮುಂದೆ ಅದು ಲಿಂಗ ಪೂಜೆಯೆಂದು ಪರಿವರ್ತತನೆಯಾಗಿ ಪ್ರಸಿದ್ಧಿಹೊಂದಿರುತ್ತದೆ. ಅಲ್ಲಿಂದ ಶಿವ ಧರ್ಮವು ಪ್ರಾರಂಭವಾಯಿತು. ಮುಂದೆ ಅದುವೇ ಶೈವಧರ್ಮದ ಉಗಮಕ್ಕೆ ಕಾರಣವಾಯಿತು ಎಂದು ಹೇಳುತ್ತಾರೆ. ಸನಾತನ ಧರ್ಮವಾದ ಈ ಶೈವ ಧರ್ಮವು ಶಿವನಿಂದ ಸ್ಥಾಪಿತವಾಗಿ ಯಜುರ್ವೇದ ಕಾಲದವರೆಗೆ ಪ್ರಸಿದ್ಧಿಹೊಂದಿತು. ಈ ಅವಧಿಯ ಮಧ್ಯದಲ್ಲಿ ಈ ಧರ್ಮದ ಕುರಿತು ಶ್ರಮಿಸಿದ ಯಾವೊಬ್ಬ ವ್ಯಕ್ತಿಗಳ ಉಲ್ಲೇಖವು ದೊರೆತಿರುವದಿಲ್ಲ. ಆದರೆ ಋಗ್ವೇದದಲ್ಲಿಯ ದಶಮ ಮಂಡಲಿಯ ಮುನಿಸೂಕ್ತ ಎಂಬುದರಲ್ಲಿ ರುದ್ರದೇವನ ಭಕ್ತರು ಮುನಿಗಳೆಂದು ವರ್ಣಿಸಿರುವುದರಿಂದ ಈ ಮಹಾಯೋಗಿಗಳೇ ಶೈವ ಧರ್ಮವನ್ನು ಮುಂದು-ವರೆಸಿಕೊಂಡು ಬಂದರೆಂದು ನಂಬಲಾಗಿರುತ್ತದೆ. ಈ ಮುನಿಸೂಕ್ತದಲ್ಲಿ ಹೇಳಿರುವಂತೆ ಅತಿಯಾದ ಯೋಗ ಸಂಪನ್ನವರು ದಿವ್ಯಸ್ವರೂಪಿಗಾಳಾದ ಇವರು ಮುನಿ-ಸಂಪ್ರದಾಯವನ್ನು ಕಟ್ಟಿಕೊಂಡು ಶಿವನಿಂದ ಸ್ಥಾಪಿತವಾದ ಶೈವ ಧರ್ಮವನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ತರವಾಯ ಯಜುರ್ವೇದ ಕಾಲದಲ್ಲಿ ಬರುವ ವೀರಭದ್ರದೇವರು ಕೂಡ ಒಬ್ಬ ಶ್ರೇಷ್ಠ ಮುನಿಗಳಾಗಿ ವೀರಶೈವ ಧರ್ಮದ ಏಳ್ಗೆಗಾಗಿ ದುಡಿದಿರುತ್ತಾರೆ. ವೀರಮಾಹೇಶ್ವರ ಪಂಥದ ಗೋತ್ರದ ಪ್ರಮುಖರಲ್ಲಿ ಒಬ್ಬರಾದ ವೀರ ಎನ್ನುವ ವ್ಯಕ್ತಿಯೇ ಈ ವೀರಭದ್ರ ಎಂದು ಪ್ರಸಿದ್ಧಿ ಹೊಂದಿ ವೀರಶೈವ ಧರ್ಮಿಯರಿಗೆ ಪೂಜ್ಯನಿಯರೆಂದು ಆರಾಧಿಸಲ್ಪಡುತ್ತಾರೆ.

ಈ ಪಂಥದ ಮತ್ತೊಬ್ಬ ಮಹಾಶಿವಯೋಗಿಗಳಾದ ನಂದಿಕೇಶ್ವರ ಮಹಾರಾಜರ ಕುರಿತಾಗಿ ಕೆಲವು ಬಿನ್ನಾಭಿಪ್ರಾಯಗಳಾಗಿದ್ದವು. ಎಂ. ಪಿ. ಪಾಟೀಲರು ಆ ಬಿನ್ನಾಭಿಪ್ರಾಯಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಅದಕ್ಕೆ ಬಲವಾದ ಕಾರಣವೂ ಇರುತ್ತದೆ. ಶಿವನಿಂದ ಸ್ಥಾಪಿತವಾದ ಶೈವ ಧರ್ಮವನ್ನು ವೀರಭದ್ರ ದೇವರ ತರುವಾಯ ನಂದಿಕೇಶ್ವರ ಮುನಿಗಳು ಶೈವ ಸಂಪ್ರದಾಯವನ್ನು ಮುಂದು-ವರೆಸಿಕೊಂಡು ಬಂದಿರುತ್ತಾರೆ. ಇತಿಹಾಸದಲ್ಲಿ ಇವರನ್ನು ಶಿಲಾದ ಮುನಿಯ ಪುತ್ರರೆಂದು ಹೇಳಲಾಗಿದೆ. ಈ ವಿಷಯವನ್ನು ಎಂ. ಪಿ. ಪಾಟೀಲರು ಅಲ್ಲಗಳೆದಿದ್ದಾರೆ. ಕಾರಣ ವೀರಭದ್ರ ದೇವರಂತೆ ನಂದೀಕೇಶ್ವರ ಮುನಿಗಳು ಕೂಡಾ ಶಿಲಾದ ಮುನಿಗಳ ಶಿಷ್ಯರಲ್ಲಿ ಒಬ್ಬರಾಗಿರುತ್ತಾರೆ. ಯಜುರ್ವೇದ ಕಾಲದಲ್ಲಿ ಆರ್ಯ ಮತ್ತು ದ್ರಾವಿಡ ಸಂಗಮದಿಂದಾಗಿ ಹಿಂದೆ ಇದ್ದಂತಹ ಲಿಂಗ ಪೂಜೆ ವಿಧಾನದಲ್ಲಿ ಕೆಲವೊಂದು ಬದಲಾವಣೆಗಳು ಆಗಿರುತ್ತವೆ. ಈ ಎರಡೂ ಸಂಸ್ಕೃತಿಗಳು ತಮ್ಮದೇ ಆದಂತಹ ಪದ್ಧತಿಯಲ್ಲಿ ಲಿಂಗಾಚರಣೆ ಕಾಯಕವನ್ನು ಮುಂದೆವರೆಸಿಕೊಂಡು ಬಂದಿರುತ್ತಾರೆ. ಲಿಂಗಪೂಜೆಯಲ್ಲಿ ವೈಭವಯುತವಾದ ಆಚರಣೆಗಳನ್ನು ಸೇರಿಸಿದ್ದರಿಂದ ಇದರ ಮೂಲಕ ಲಿಂಗದ ಪಾವಿತ್ರ್ಯತೆಗೆ ಧಕ್ಕೆ ಬಂದು ಲಿಂಗದ ಮುಖ್ಯ ತತ್ವವನ್ನು ಅರಿಯದೇ ಕೇವಲ ಮೇಲ್ಮುಖವಾದ, ಯಾಂತ್ರಿಕ ಆಚರಣೆಯಲ್ಲಿ ತೊಡಗಿದ್ದನ್ನು ನಂದಿಕೇಶ್ವರ ಮುನಿಗಳು ಬಲವಾಗಿ ಖಂಡಿಸುತ್ತಾರೆ. ಲಿಂಗದ ನಿಜವಾದ ನಿಯಮಗಳನ್ನು ಹೇಳುತ್ತಾ, ಲಿಂಗವು ಕೇವಲ ಪೂಜೆಗೆ ಮಾತ್ರ ಯೋಗ್ಯವಾಗಿರದೇ ಅದು ವ್ಯಕ್ತಿಯ ಜನ್ಮಕಾಲದಿಂದ ಹಿಡಿದು ಜೀವಿತದವರೆಗೂ ಅವನ ಮೈಮೇಲೆ ಇದ್ದು ಅವನು ಅಂತ್ಯವಾದ ಬಳಿಕ ಅವನ ಶವದ ಮೇಲೆ ಸ್ಥಾಪಿಸಲ್ಪಟ್ಟಿರಬೇಕೆಂದು ಲಿಂಗದ ಮಹತ್ವವನ್ನು ಆ ಕಾಲದಲ್ಲಿ ಸಾರಿ ಹೇಳಿದ ಒಬ್ಬ ಶ್ರೇಷ್ಠ ಸಂತರಾಗಿರುತ್ತಾರೆ. ನಂದಿಕೇಶ್ವರರ ಮುನಿಗಳು ಪ್ರಚಾರ ಮಾಡಿದ ಲಿಂಗಪೂಜಾ ಆರಾಧನೆಯು ಮತ್ತು ವೀರಶೈವ ಧರ್ಮವು ಕಾಲಾಂತರದಲ್ಲಿ ಮರಿಚೀಕೆಯಾಗಿರುತ್ತದೆ. ಅದಕ್ಕೆ ಕಾರಣ ಲಿಂಗದ ಕುರಿತು ಸರಿಯಾದ ಆಚರಣೆಗಳು ಗೊತ್ತಿಲ್ಲದಿರುವುದು. ಮುಂದೆ ೧೨ನೇ ಶತಮಾನದ ಶ್ರೇಷ್ಠ ವಚನಕಾರರಾದ ಬಸವೇಶ್ವರ ಅಲ್ಲಮಪ್ರಭುದೇವ, ಅಕ್ಕಮಹಾದೇವಿಯಂತಹ ಶರಣರಿಂದ ಮತ್ತೇ ಮರುಹುಟ್ಟು ಪಡೆದಿರುತ್ತದೆ. ಈ ಮಹನೀಯರು ಲಿಂಗಪೂಜೆಯನ್ನು ಕೈಗೊಳ್ಳುವುದರ ಜೊತೆಯಲ್ಲಿಯೇ ಅದರ ಮಹತ್ವವನ್ನು ಇತರೇ ಜನಾಂಗದ ಶಿವಶರಣರಿಗೂ ಬೋಧಿಸುತ್ತಾರೆ. ಲಿಂಗದ ನಿಜವಾದ ತತ್ವವನ್ನು ಪ್ರಚಾರ-ಗೊಳಿಸುವದರ ಜೊತೆಗೆ ವೀರಭದ್ರದೇವರಿಂದ ಸ್ಥಾಪಿತವಾಗಿದ್ದ ವೀರಶೈವ ಧರ್ಮವನ್ನೂ ಪ್ರಚಾರಗೊಳಿಸಿರುತ್ತಾರೆ. ವೀರಭದ್ರ ದೇವರ ಕುರಿತು ಹೇಳುವ

ಸಂಧರ್ಭದಲ್ಲಿ ವೀರಶೈವ ಧರ್ಮವನ್ನು ಪ್ರಚಾರಗೊಳಿಸಿದ ನಂದಿಕೇಶ್ವರ ಮುನಿಗಳು ಮಾಡಿದ ಸಾಧನೆಗಳ ಮೇಲೆ ಬೆಳಕು ಚೆಲ್ಲುವ ಕಾರ್ಯವನ್ನು ಈ ಕೃತಿಯಲ್ಲಿ ಮಾಡಿದ್ದಾರೆ. ಈ ಅಂಶ ವೀರಭದ್ರ ದೇವರು ದಕ್ಷನ ಯಜ್ಞವನ್ನು ನಾಶಮಾಡಿರುವದಿಲ್ಲ ಎಂಬ ವಾದವನ್ನು ಪುಷ್ಟಿಕರಿಸಲಿಕ್ಕೆ ಬಲವಾದ ಸಾಕ್ಷಿಯಾಗಿರುತ್ತದೆ ಎಂದು ಎಂ. ಪಿ. ಪಾಟೀಲರು ಅಭಿಪ್ರಾಯಪಟ್ಟಿದ್ದಾರೆ.

ಎಂ. ಪಿ. ಪಾಟೀಲರು ಪಾಶುಪಥ ಧರ್ಮದ ಉಗಮ, ಅದರ ಪ್ರಸಿದ್ಧಿಯ ಕುರಿತು ಮಹತ್ವದ ವಿಚಾರಗಳನ್ನು ಈ ಕೃತಿಯಲ್ಲಿ ಚರ್ಚಿಸಿದ್ದಾರೆ. 'ಶ್ಲೋಕ ೪೩-೪೫ ರಲ್ಲಿ' ಸ್ಕಂದ ದೇವನ ಕುರಿತು ಹೇಳುವಾಗ ಇತನ ಮೂಲ ತಮಿಳನಾಡು ಆಗಿತ್ತೆಂದು ಅಲ್ಲಿ ಸ್ಕಂದ ದೇವನು ಮುರುಗದೇವನಾಗಿ ಆರಾಧಿಸಲ್ಪಡುತ್ತಿದ್ದನೆಂದು ಉಲ್ಲೇಖಗಳು ದೊರೆತಿರುತ್ತವೆ. ಈ ಮುರುಗದೇವರನ್ನು ಆರಾಧಿಸುವ ಧರ್ಮವೇ ಪಾಶುಪತ ಧರ್ಮವೆಂದು ಪ್ರಸಿದ್ಧಿ ಹೊಂದಿತ್ತು ಎಂದು ಎಂ. ಪಿ. ಪಾಟೀಲರು ಹೇಳಿದ್ದಾರೆ. ಸ್ವಂತತ್ರ ದೇವತೆಯಾಗಿದ್ದ ಈ ಮುರುಗದೇವರು ಕಾಲಾನುಕ್ರಮದಲ್ಲಿ ಪ್ರಸಿದ್ಧನಾದರಿಂದ ಇವನನ್ನು ಶಿವನ ಪುತ್ರನಾದ ಸ್ಕಂದ ದೇವನೊಡನೆ ಸಮೀಕರಿಸಿ ಇವನ ಮಹಿಮೆಯನ್ನು ಪ್ರಸಿದ್ಧಗೊಳಿಸಲಾಯಿತು. ಈ ಸಮಯದಲ್ಲಿ ದಕ್ಷಿಣಕ್ಕೆ ಬಂದ ಅಗಸ್ತ್ಯ ಮುನಿಗಳು ಈ ಧರ್ಮವನ್ನು ಸ್ವೀಕರಿಸುವುದರ ಜೊತೆಗೆ ಸ್ಕಂದನಿಂದ ಪಂಚಾಕ್ಷರಿ ಹಾಗು ಷಡಕ್ಷರಿ ಮಂತ್ರಗಳನ್ನು ತಿಳಿದುಕೊಂಡರೆಂದು ಮೇಲಿನ ಶ್ಲೋಕದಲ್ಲಿ ಉದಾಹರಿಸಿದ್ದಾರೆ. ಪಾಶುಪತ ಪಂತವು ಕಾಲಾನುಕ್ರಮದಲ್ಲಿ ವೈದಿಕ ಧರ್ಮದ ರೂಪದಲ್ಲಿ ಬದಲಾಗಿ ಶೈವಸಿದ್ಧಾಂತ ಅಥವಾ ತಮಿಳು ಶೈವ ಪಂತವಾಗಿ ಬದಲಾಗಿರುತ್ತದೆ. ಹೀಗೆ ವಿವಿಧ ನಾಮಧೆಯಗಳೊಂದಿಗೆ ಪ್ರಸಿದ್ಧಿಪಡೆದ ಪಾಶುಪತ ಪಂತವು ೧೨ನೇ ಶತಮಾನ ಅಂದರೆ ಬಸವಯುಗದವರೆಗೆ ಬಾಳಿ ಬದುಕಿ ನಂತರ ವೀರಶೈವ ಧರ್ಮದಲ್ಲಿ ಲೀನವಾಗಿರುತ್ತದೆ. ವೀರಶೈವ ಧರ್ಮದ ಪ್ರತಿಪಾದಕರಾದ ವೀರಭದ್ರದೇವರು, ನಂದೀಕೇಶ್ವರ ಶಿವಯೋಗಿಗಳ, ಸ್ಕಂದ ದೇವರ ಉಪದೇಶದ ಮೇರೆಗೆ ಈ ಧರ್ಮದ ವಿಧಿವಿಧಾನಗಳನ್ನು ಪಾಲಿಸುವ ಜನರನ್ನು ವೀರಮಾಹೇಶ್ವರರೆಂದು ಸ್ಕಂದಪುರಾಣದ ೪೭ನೇ ಶ್ಲೋಕದಲ್ಲಿ ಉಲ್ಲೇಖಿಸಿರುವುದನ್ನು ಎಂ. ಪಿ. ಪಾಟೀಲರು ಗುರುತಿಸಿದ್ದಾರೆ. ಮೇಲಿನ ವಿಚಾರವನ್ನು ಮುಂದಿಟ್ಟುಕೊಂಡು ಪ್ರಾಚೀನ ಕಾಲದ ವೀರಮಾಹೇಶ್ವರ ಪಂತದ ಪ್ರತಿಪಾದಕರಾದ ವೀರಭದ್ರ ದೇವರು ಮತ್ತು ನಂದಿಕೇಶ್ವರ ಶಿವಯೋಗಿಗಳು ಕೂಡಿಕೊಂಡು ವೀರಶೈವ ಧರ್ಮವನ್ನು ಪ್ರಚಾರಗೊಳಿಸಿದರೆಂದು ತಿಳಿದುಬರುತ್ತದೆ.

ಈ ಕೃತಿಯಲ್ಲಿ ಎಂ. ಪಿ. ಪಾಟೀಲರು ಹೇಳುವ ಇನ್ನೊಂದು ಸಂಗತಿ, ಸ್ಕಂದ ಪುರಾಣದ ರಚನಾಕರ್ತರು ವೀರಶೈವರು ಅಲ್ಲ. ಅವರು ವೈದಿಕ ಶೈವರಾಗಿರುತ್ತಾರೆ.

ಈ ವೈದಿಕ ಶೈವರು ತಮ್ಮ ಪುರಾಣದಲ್ಲಿ ವೀರಭದ್ರದೇವರ ವ್ಯಕ್ತಿತ್ವವನ್ನು ಅತಿ ಗೌರವಪೂರ್ವಕವಾದ ಉಕ್ತಿಗಳಿಂದ ಉಲ್ಲೇಖಿಸಿರುವುದನ್ನು ಗಮನಿಸಿದರೆ ವೀರಭದ್ರದೇವರು ಆ ಕಾಲದ ಎಂಥ ಮಹಿಮಾ ಪುರುಷರಾಗಿದ್ದರು ಎಂಬುದು ಗೊತ್ತಾಗುತ್ತದೆ. ಇಂತವರು ಶಿವನ ಆಜ್ಞೆಯ ಮೇರೆಗೆ ದಕ್ಷನ ಯಜ್ಞವನ್ನು ನಾಶ ಮಾಡಿರಲಿಕ್ಕೆ ಸಾಧ್ಯವಿಲ್ಲವೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಸ್ಕಂದ ಪುರಾಣ ಕೃರ್ತ ಸ್ಕಂದ ದೇವರು ಪಾಶುಪತ ಧರ್ಮವನ್ನು ಹುಟ್ಟುಹಾಕಿ ಕಾಲಾಂತರದಲ್ಲಿ ವೀರಭಧ್ರ ದೇವರಂತ ವ್ಯಕ್ತಿಗಳಿಂದ ಅದನ್ನು ವೀರಶೈವ ಧರ್ಮವನ್ನಾಗಿ ಪರಿವರ್ತಿಸಿ ಪುನಶ್ಚೇತನಗೊಳಿಸಿದರು.

ಮೇಲೆ ಹೇಳಿರುವ ವಿಚಾರಗಳನ್ನು ಪರಿಶೀಲಿಸಿದಾಗ 'ವೀರಶೈವ ಧರ್ಮ ಪ್ರವರ್ತಕ ವೀರಭದ್ರ ದೇವರು ದಕ್ಷ ಯಜ್ಞ ಸಂಹಾರಕ ವೀರಭದ್ರನಲ್ಲ' ಎಂಬ ಸಂಗತಿಯನ್ನು ವಿದ್ವಾಂಸರ ಹೇಳಿಕೆಗಳು, ಪುರಾಣ, ಆಕರಗಳ ಆಧಾರದಿಂದ ಕೇಲವು ಮಹತ್ವವಾದ ವಿಚಾರಗಳನ್ನು ಈ ಕೃತಿಯಲ್ಲಿ ಸ್ಪಷ್ಟ ಪಡಿಸಿರುತ್ತಾರೆ. ವೀರಭದ್ರ ದೇವರು ಮತ್ತು ವೀರಶೈವ ಧರ್ಮದ ಕುರಿತು ಇಲ್ಲಿವರೆಗಿನ ಅಧ್ಯಯನಗಳ ಸಾಧ್ಯಂತ ಸಾದರಗಳನ್ನು ಗಮನಿಸಿಕೊಂಡು ಆ ನಿಟ್ಟಿನಲ್ಲಿ ವೀರಭದ್ರ ದೇವರ ಇತಿಹಾಸವನ್ನು ಪುನರ್ ರೂಪಿಸಿ ವೀರಭದ್ರ ದೇವರಿಗೆ ಒಂದು ಮೌಲ್ಯಯುತವಾದ ಸ್ಥಾನಮಾನವನ್ನು ಒದಗಿಸಿಕೊಡುವ ಕಾರ್ಯವನ್ನು ಮಾಡಿದ್ದಾರೆ.

ಎಂ. ಪಿ. ಪಾಟೀಲರು ಸಂಶೋಧನೆ ಮಾಡಿರುವ ವೀರಭದ್ರ ದೇವರ ಕೃತಿಯು ಕುರಿತು ವಿದ್ವಾಂಸರಾದ ಶ್ರೀ ಟಿ ಎಸ್ ಮಲ್ಲಪ್ಪ, ಸ. ಸ. ಮಾಳವಾಡರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ವೀರಭದ್ರ ದೇವರ ಕುರಿತು ಎಂ. ಪಿ. ಪಾಟೀಲರು ಮಾಡಿರುವ ಅಧ್ಯಯನ ಸ್ತುತ್ಯಾರ್ಹವಾಗಿರುತ್ತದೆ. ಈ ಕಾರ್ಯಕ್ಕಾಗಿ ಅವರು ಅಖ್ಯಾಯಿಕೆಗಳನ್ನು ಮತ್ತು ಪುರಾಣಗಳನ್ನು ಸಂಗ್ರಹಿಸಿ ವಿಮರ್ಶೆ ಮಾಡಿರುವುದು ಔಚಿತ್ಯಪೂರ್ಣಗಿದೆ. ಶಿವನ ಆರಾಧಕರಲ್ಲಿ ವೀರಭದ್ರದೇವರು ಕೂಡ ಒಬ್ಬರಾಗಿದ್ದರಿಂದ ಪುರಾಣಗಳಲ್ಲಿ ಇವರ ಆಕೃತಿಯನ್ನು ಈ ರೀತಿ ಬಿಂಬಿಸಲಾಗಿರುತ್ತದೆ. ಆದರೆ ವೀರಭದ್ರ ದೇವರು ಧರ್ಮೋಪದೇಶ ಮಾಡುತ್ತ ಹಿಂಸಾತ್ಮಕ ಯಜ್ಞಧ್ವಂಸಕನಾಗಿ ಶತ್ರುಗಳಿಂದ ವೀರಶೈವರನ್ನು ರಕ್ಷಿಸಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಇಂಥ ವೀರಭದ್ರದೇವರು ಯಜ್ಞದಲ್ಲಿ ಶಿವನಿಗೆ ಅವಿರ್ಭಾಗ ಕೊಡಲಿಲ್ಲ ಎಂಬ ಕಾರಣಕ್ಕಾಗಿ ಯಜ್ಞ ಸಂತತಿಯ ವಿರುದ್ಧ ಹೋರಾಡಿದರು ಎಂಬ ಪುರಾಣಗಳಲ್ಲಿಯ ವಿಚಾರಗಳನ್ನು ತಪ್ಪೆಂದು ವಾದಿಸಿದ ಎಂ. ಪಿ. ಪಾಟೀಲರ ವಿಚಾರವನ್ನು ಒಪ್ಪಬಹುದಾಗಿದೆ. ವೀರಶೈವರಿಗೆ ಪ್ರಿಯನಾಗಿದ್ದ ವೀರಭದ್ರ ದೇವರು ಹಿಂದಿನಿಂದ ನಡೆದುಕೊಂಡ ಬಂದ

ಶೈವಸಂಪ್ರದಾಯದವನ್ನು ಮುಂದುವರೆಸಿಕೊಂಡು ಬಂದಿರುತ್ತಾರೆ. ಈ ಲೇಖನದಲ್ಲಿ ಹೇಳಿರುವ ಲಿಂಗಪೂಜೆ, ಉಗಮ, ವಿಕಾಸ, ಪಾಶುಪಥ ಧರ್ಮ, ವೀರಶೈವ ಪಂಥಗಳು, ವೀರ, ನಂದಿ, ಸ್ಕಂದ ಮುನಿಗಳ, ಕುರಿತು ಮಹತ್ವಪೂರ್ಣವಾದ ವಿಚಾರಗಳು ಈ ಲೇಖನದ ತರ್ಕಬದ್ಧತೆಯನ್ನು ಹೆಚ್ಚಿಸುವಲ್ಲಿ ಬಹಳ ಉಪಯುಕ್ತಕಾರಿಯಾಗಿವೆ. ಇಂತಹ ಇಳಿವಯಸ್ಸಿನಲ್ಲಿಯೂ ಪುರಾಣ ವ್ಯಕ್ತಿಯಾದ ವೀರಭದ್ರ ದೇವರ ಕುರಿತು ಎಂ. ಪಿ. ಪಾಟೀಲರು ಕೈಕೊಂಡ ಸಂಶೋಧನಾ ಕೃತಿಯು ಸಂಶೋಧಕ ಬಳಗದಲ್ಲಿ ಉನ್ನತವಾದ ಸ್ಥಾನವನ್ನು ಪಡೆದಿರುವುದು ನಿಜಕ್ಕೂ ಆ ಕೃತಿಗೆ, ಎಂ. ಪಿ. ಪಾಟೀಲರಿಗೆ ಸಲ್ಲತಕ್ಕ ಗೌರವವಾಗಿರುತ್ತದೆ. ಎಂದು ಈ ವಿಂದ್ವಾಸರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿರುತ್ತಾರೆ.

**ಅಡಿ ಟಿಪ್ಪಣಿಗಳು:**

೧) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೩೫

೨) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೩೨

೩) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೪೩

೪) ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನ ಸಿದ್ಧಿ, ಪ್ರಕಟಣೆ : ಕ.ವಿ.ವಿ. ಧಾರವಾಡ, ಪು. ಸಂ. : ೫

೫) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೮೪

೬) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೧೬

೭) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ ಎಸ್. ಮರಿಗುದ್ದಿ. ಪು. ಸಂ. : ೧೨೭

೮) ಬಸವಣ್ಣನವರು, ಸಂಪಾದಕರು, ಎಂ. ಚಿದಾನಂದಮೂರ್ತಿಪು. ಸಂ. : ೮೬

೯) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ ಎಸ್. ಮರಿಗುದ್ದಿ. ಪು. ಸಂ. : ೧೪೨

೧೦) ಬಸವಣ್ಣನವರ ವ್ಯಕ್ತಿತ್ವ ಹಾಗೂ ಜೀವನ ಸಿದ್ಧಿ, ಪ್ರಕಟಣೆ : ಕ.ವಿ.ವಿ. ಧಾರವಾಡ, ಪು. ಸಂ. : ೧೪–೧೫

೧೧) ಕಾಪಾಲಿಕರು ಮತ್ತು ಕಾಳಾಮುಖರು ಇಂಗ್ಲೀಷ ಮೂಲ ಡೆವ್ಹಿಡ್. ಲಾರೆಂಜನ್ / ಕನ್ನಡ ಅನುವಾದ ವಿರುಪಾಕ್ಷ ಕುಲಕರ್ಣಿ, ಪು. ಸಂ. ೧೫

೧೨) ಕಾಪಾಲಿಕರು ಮತ್ತು ಕಾಳಾಮುಖರು ಇಂಗ್ಲೀಷ ಮೂಲ ಡೆವ್ಹಿಡ್. ಲಾರೆಂಜನ್ / ಕನ್ನಡ ಅನುವಾದ ವಿರುಪಾಕ್ಷ ಕುಲಕರ್ಣಿ, ಪು. ಸಂ. ೧೩೦

೧೩) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೨೭

೧೪) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೭೪

೧೫) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೮೦

೧೬) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೮೩

೧೭) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೧೮೪

೧೮) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೨೦೯

೧೯) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೨೧೨

೨೦) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೨೧೪

೨೧) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೨೦೭

೨೨) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೨೨೦

೨೩) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೩೨೬

೨೪) ಎಂ. ಪಿ. ಪಾಟೀಲರ ಸಂಶೋಧನೆಗಳು, ಸಂಪಾದಕರು, ಡಾ. ಗುರುಪಾದ. ಎಸ್. ಮರಿಗುದ್ದಿ. ಪು. ಸಂ. : ೨೩೨

ಅಧ್ಯಾಯ ೫

## ಅಧ್ಯಯನದ ಫಲಿತಗಳು

ಬೆಳಗಾವಿ ಜಿಲ್ಲೆಯ ವಿದ್ವತ್ ಪರಂಪರೆಗೆ ತನ್ನದೇ ಆದ ವಿಶಿಷ್ಟ ಕೊಡುಗೆ ನೀಡಿರುವ ದಿ. ಮಲ್ಲನಗೌಡ ಪಾಟೀಲರು, ಸಾಹಿತ್ಯ ಸಂಶೋಧನೆ, ರಾಜಕೀಯ ಶೈಕ್ಷಣಿಕ, ಸಹಕಾರ, ಸ್ವಾತಂತ್ರ್ಯ ಮುಂತಾದ ಕ್ಷೇತ್ರಗಳಲ್ಲಿ ಗಣನೀಯ ಸೇವೆ ಸಲ್ಲಿಸಿರುತ್ತಾರೆ. ಆ ಮೂಲಕ ಗಡಿಭಾಗ ಬೆಳಗಾವಿಯ ಪರಿಸರದಲ್ಲಿ ಸ್ಮರಣೀಯ ವ್ಯಕ್ತಿಗಳಾಗಿದ್ದಾರೆ. ಬೆಳಗಾವಿ ಜಿಲ್ಲೆಯ ಮಹಾರಾಷ್ಟ್ರದ ಗಡಿಗೆ ಹೊಂದಿಕೊಂಡಿರುವ ಸಂಕೇಶ್ವರದ ವತನದಾರಿ ಗೌಡಿಕೆಯ ಕುಟುಂಬದಲ್ಲಿ ಜನಿಸಿದ ಮಲ್ಲನಗೌಡರು ತಮ್ಮದೇ ಆದ ವಿಶಿಷ್ಟ ವ್ಯಕ್ತಿತ್ವದಿಂದ ಸಾಮಾಜಿಕ, ಸಾಹಿತ್ಯಿಕ, ರಾಜಕೀಯ, ಶೈಕ್ಷಣಿಕ, ಕ್ಷೇತ್ರಗಳಿಗೆ ಗಮನಾರ್ಹವಾದ ಕೊಡುಗೆ ನೀಡಿರುತ್ತಾರೆ. ಮಲ್ಲನಗೌಡರ ತಂದೆ ಪುನಗೌಡರ ಹಿರಿಯರು ಸಾಕಷ್ಟು ಪಿತ್ರಾರ್ಜಿತ ಆಸ್ತಿಯನ್ನು ಹೊಂದಿದ್ದರೂ ಅನಿವಾರ್ಯ ಕಾರಣದಿಂದ ಎಂ. ಪಿ. ಪಾಟೀಲರು ಜನಿಸುವ ವೇಳೆಗೆ ಈ ಆಸ್ತಿಯು ಸಂಪೂರ್ಣ ಕರಗಿ ಹೋಗಿರುತ್ತದೆ. ಈ ಸಂದರ್ಭದಲ್ಲಿ ಮಲ್ಲನಗೌಡರು ತಮ್ಮ ತಂದೆ–ತಾಯಿ ಇಬ್ಬರು ಸಹೋದರಿಯರೊಂದಿಗೆ ಕಷ್ಟದ ಜೀವನ ನಡೆಸಬೇಕಾದ ಅನಿವಾರ್ಯತೆ ಬಂದೊದಗುತ್ತದೆ. ಇದಾವುದಕ್ಕೂ ಹೆದರದ ಮಲ್ಲನಗೌಡರು ಕಷ್ಟದ ಪರಿಸ್ಥಿತಿಯಲ್ಲಿ ತಂದೆ–ತಾಯಿಯ ಹೆಗಲಿಗೆ ಹೆಗಲು ಕೊಟ್ಟು ಕೆಲಸ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾ ಸಂಕೇಶ್ವರದಲ್ಲಿರುವ ಮರಾಠಿ ಶಾಲೆಗೆ ಸೇರಿಕೊಳ್ಳುತ್ತಾರೆ.

ಸಂಕೇಶ್ವರ ಭಾಗವು ಮುಂಬಯಿ ಪ್ರಾಂತದ ಅಧೀನಕ್ಕೆ ಒಳಪಟ್ಟಿದ್ದರಿಂದ ಮನೆತನದ ಭಾಷೆ, ಸುತ್ತಮುತ್ತಲಿನ ಪರಿಸರ ಕನ್ನಡವಾದರು ಅನಿವಾರ್ಯವಾಗಿ ಮರಾಠಿ ಶಿಕ್ಷಣವನ್ನೇ ಕಲಿಯಬೇಕಾಗುತ್ತದೆ. ಹಿರಿಯರ ತಂದೆ–ತಾಯಿಗಳು ಅಶೀರ್ವಾದದಿಂದ ಮೊದಲ ಹಂತದ ಪ್ರಾಥಮಿಕ ಶಿಕ್ಷಣವನ್ನು ಸುವ್ಯವಸ್ಥಿತವಾಗಿ ಪೂರ್ಣಗೊಳಿಸುತ್ತಾರೆ. ಮಲ್ಲನಗೌಡರಿಗೆ ಹದಿಮೂರನೆ ವಯಸ್ಸಿನಲ್ಲಿ ಮದುವೆ ಮಾಡುತ್ತಾರೆ. ಮದುವೆ ಆದ ಮೇಲೆ ಶಿಕ್ಷಣವನ್ನು ಮುಂದುವರೆಸಲು ಅನುಮತಿ ನೀಡಬೇಕೆಂಬ ಶರತ್ತಿನೊಂದಿಗೆ ಮದುವೆಮಾಡಿಕೊಂಡ ಎಂ. ಪಿ. ಪಾಟೀಲರು ಶಿಕ್ಷಣ ಪಡೆಯಲು ಕೊಲ್ಲಾಪುರಕ್ಕೆ ತೆರಳುತ್ತಾರೆ. ಈ ಸಂಧರ್ಭದಲ್ಲಿ ತಂದೆ–ತಾಯಿ ಇಬ್ಬರನ್ನೂ ಕಳೆದುಕೊಂಡು ಅನಾಥರಾಗುತ್ತಾರೆ. ಚಿಕ್ಕ ವಯಸ್ಸಿನ ಹೆಂಡತಿ ಮತ್ತು ತಂಗಿಯನ್ನು ಹೆಗಲಿಗೆ ಕಟ್ಟಿಕೊಂಡು ಬದುಕು ಕಟ್ಟಿಕೊಳ್ಳಲು ಹೋರಾಡುತ್ತಾರೆ. ಆದರೂ ಎದೆಗುಂದದೆ ಬಂದಂಥ ನೋವನ್ನು ನುಂಗಿಕೊಂಡು ಕೊಲ್ಲಾಪುರದಲ್ಲಿ

ಎರಡನೇ ಹಂತದ ಪ್ರಾಥಮಿಕ ಶಿಕ್ಷಣವನ್ನು ಮುಗಿಸಿಕೊಂಡು ಸ್ವಗ್ರಾಮ ಸಂಕೇಶ್ವರಕ್ಕೆ ಬರುತ್ತಾರೆ.

ಪುಣೆ ಹಾಗೂ ಮುಂಬಯಿಗಳಿಗೆ ತೆರಳಿ ಉನ್ನತ ಶಿಕ್ಷಣವನ್ನು ಪೂರ್ಣಗೊಳಿಸುತ್ತಾರೆ. ಮುಂಬಯಿಯಲ್ಲಿ ವಕೀಲಿ ಪದವಿಯನ್ನು ಪೂರ್ಣಗೊಳಿಸಿದ ಎಂ. ಪಿ. ಪಾಟೀಲರು ತಮ್ಮ ವೃತ್ತಿ ಜೀವನಕ್ಕೆ ದಾರಿಕಂಡುಕೊಳ್ಳಬೇಕೆಂಬ ಉದ್ದೇಶದಿಂದ ಆ ಕಾಲದ ತಾಲೂಕಾ ಸ್ಥಳವಾದ ಹುಕ್ಕೇರಿಯಲ್ಲಿ ವಕೀಲಿವೃತ್ತಿಯನ್ನು ಪ್ರಾರಂಭಿಸುತ್ತಾರೆ. ಈ ಕ್ಷೇತ್ರದಲ್ಲಿ ಒಂದೊಂದೆ ಹೆಜ್ಜೆಯನ್ನು ಇಡುತ್ತ ಅತಿ ಕಡಿಮೆ ಅವಧಿಯಲ್ಲಿಯೇ ಎತ್ತರ-ಎತ್ತರಕ್ಕೆ ಬೆಳೆಯುತ್ತಾರೆ. ಹಾಗೂ ಜೀವನದಲ್ಲಿ ಒಂದು ಗಟ್ಟಿಯಾದ ನೆಲೆ ಕಂಡುಕೊಳ್ಳುತ್ತಾರೆ. ಈ ಸಮಯದಲ್ಲಿ ದೇಶ ಸೇವೆಯ ಕಾರ್ಯಕ್ಕೆ ಕರೆ ಬಂದಿದ್ದರಿಂದ ಸೈನಿಕ ಸೇವೆಗೆ ಸೇರಿಕೊಳ್ಳುತ್ತಾರೆ. ಸೈನ್ಯದಲ್ಲಿ ದಕ್ಷತೆ ಪ್ರಾಮಾಣಿಕತೆಯಿಂದ ಕಾರ್ಯ ನಿರ್ವಹಿಸುತ್ತ ಸೇನೆಯಲ್ಲಿನ ವಿವಿಧ ಹುದ್ದೆಗಳನ್ನು ಅಲಂಕರಿಸುತ್ತಾರೆ. ತರುವಾಯ ಅಲ್ಲಿಂದ ಹೊರಬಂದು ರಾಜಕೀಯ ರಂಗಕ್ಕೆ ಇಳಿಯುತ್ತಾರೆ. ಆ ಕಾಲದ ಶ್ರೇಷ್ಠ ಪಕ್ಷವೆಂದು ಖ್ಯಾತಿಗಳಿಸಿದ್ದ ಕಾಂಗ್ರೇಸ ಪಕ್ಷಕ್ಕೆ ಸೇರಿಕೊಂಡು ಪಕ್ಷವಹಿಸಿದ ಕಾರ್ಯಗಳನ್ನು ಜವಾಬ್ದಾರಿಯಿಂದ ನಿರ್ವಹಿಸುತ್ತಾರೆ. ಸಂಕೇಶ್ವರ ಹಾಗೂ ಬೆಳಗಾವಿ ಭಾಗದ ನಿಷ್ಠಾವಂತ ರಾಜಕಾರಣಿಯಾಗಿ, ಜನನಾಯಕರಾಗಿ ಜನತೆಯ ಪ್ರೀತಿಗೆ ಪಾತ್ರರಾಗುತ್ತಾರೆ. ಇದೇ ಸಮಯಕ್ಕೆ ಮುಂಬಯಿ ಪ್ರಾಂತದ ಚುನಾವಣೆಗಳು ಘೋಷಣೆಯಾದ್ದರಿಂದ ಈ ಚುನಾವಣೆಯಲ್ಲಿ ಬೆಳಗಾವಿ ಭಾಗದಿಂದ ಸ್ಪರ್ಧಿಸಿ ವಿಜಯಿ ಆಗುತ್ತಾರೆ. ಆ ಮೂಲಕ ಬಿ. ಜಿ. ಖೇರ ಅವರ ನೇತೃತ್ವದ ಸಚಿವ ಸಂಪುಟದಲ್ಲಿ ಕೃಷಿ ಮಂತ್ರಿಗಳ ಸಂಸದಿಯ ಕಾರ್ಯದರ್ಶಿಯೆಂದು ನೇಮಕಹೊಂದುತ್ತಾರೆ. ಸಂಸದಿಯ ಕಾರ್ಯದರ್ಶಿಗಳಾಗಿ ಅಧಿಕಾರವಹಿಸಿಕೊಂಡ ಎಂ. ಪಿ. ಪಾಟೀಲರು ಕೃಷಿ ಕ್ಷೇತ್ರದಲ್ಲಿ ಹಲವಾರು ಬದಲಾವಣೆಗಳನ್ನು ತರುತ್ತಾರೆ. ಹಾಗೆಯೇ ಈ ಭಾಗದ ರೈತರ ಸಮಸ್ಯೆಗಳನ್ನು ಸದನದಲ್ಲಿ ಪ್ರಸ್ತಾಪಿಸುವ ಮೂಲಕ ಅವುಗಳಿಗೆ ಪರಿಹಾರವನ್ನು ಕೊಡಿಸುತ್ತಾರೆ. ಸಂಸದಿಯ ಕಾರ್ಯದರ್ಶಿಯೆಂದು ಕಾರ್ಯನಿರ್ವಹಿಸುತ್ತಿರುವ ಸಮಯದಲ್ಲಿ ಇವರು ಮಾಡಿದ ಇನ್ನೊಂದು ಮಹತ್ವದ ಕಾರ್ಯ ಈ ಭಾಗದ ರೈತರ ಮಕ್ಕಳ ಅನುಕೂಲಕ್ಕಾಗಿ ಧಾರವಾಡದಲ್ಲಿ ಕೃಷಿ ಕಾಲೇಜನ್ನು ಸ್ಥಾಪನೆ ಮಾಡಿದ್ದು. ಹೀಗೆ ರೈತರ ಏಳ್ಗೆಗಾಗಿ ಹಗಲಿರುಳು ದುಡಿದು ರೈತರ ಜೀವನವನ್ನು ಸುಭದ್ರಗೊಳಿಸಲು ಹೋರಾಡಿರುತ್ತಾರೆ.

ಈ ಸಮಯಕ್ಕೆ ಅಧಿಕಾರದ ಅವಧಿ ಕೊನೆಗೊಂಡು ಎರಡನೇ ಸಾರ್ವತ್ರಿಕ ಚುನಾವಣೆಗಳು ಘೋಷಣೆ ಆಗಿದ್ದರಿಂದ ಎಂ. ಪಿ. ಪಾಟೀಲರು ಈ ಚುನಾವಣೆಗೆ

ಸ್ಪರ್ಧಿಸುತ್ತಾರೆ. ಅವರು ಹಿಂದೆ ಮಾಡಿದಂತಹ ಕಾರ್ಯವನ್ನು ಗಮನಿಸಿದ ಕ್ಷೇತ್ರದ ಮತದಾರರು ಎರಡನೇ ಅವಧಿಗೂ ಎಂ. ಪಿ. ಪಾಟೀಲರನ್ನು ಪುನರಾಯ್ಕೆ ಮಾಡುತ್ತಾರೆ. ಮುಂಬಯಿ ಪ್ರಾಂತದಲ್ಲಿ ಕಾಂಗ್ರೇಸ ಪಕ್ಷವು ಮತ್ತೆ ಬಹುಮತ ಪಡೆದುದ್ದರಿಂದ ಬಿ. ಜಿ. ಖೇರ ಅವರ ಸಂಪುಟದಲ್ಲಿ ಅರಣ್ಯ ಸಚಿವರೆಂದು ನೇಮಕ ಹೊಂದುತ್ತಾರೆ. ವನಮಹೋತ್ಸವದಂತಹ ಜನಪ್ರಿಯ ಕಾರ್ಯಕ್ರಮಗಳನ್ನು ರೂಪಿಸಿ ಅರಣ್ಯದ ಅಭಿವೃದ್ಧಿಗೆ ಹಲವು ಯೋಜಗಳನ್ನು ಹಾಕಿಕೊಂಡು ಅವುಗಳನ್ನು ಕಾರ್ಯಗತಗೊಳಿಸಿರುತ್ತಾರೆ.

ಎಂ. ಪಿ. ಪಾಟೀಲರು ಜಾರಿಗೆ ತಂದ ವನಮಹೋತ್ಸವ ಕಾರ್ಯಕ್ರಮವು ಸಾಕಷ್ಟು ಪ್ರಸಿದ್ಧಿಯನ್ನು ಹೊಂದುತ್ತದೆ. ಅದು ಕೇವಲ ಮುಂಬಯಿ ಪ್ರಾಂತದ ಯೋಜನೆ ಮಾತ್ರವಾಗದೆ ಇಡೀ ಭಾರತದ ಯೋಜನೆಯಾಗುತ್ತದೆ.

ತರುವಾಯ ನಡೆದ ಮೂರನೇ ಪ್ರಾಂತಿಯ ಚುನಾವಣೆಗೆ ಸ್ಪರ್ದಿಸುತ್ತಾರೆ. ಅದರಲ್ಲಿಯೂ ಜಯಶಾಲಿಯಾಗಿ ಮುರಾರ್ಜಿ ದೇಸಾಯಿ ಅವರ ಮಂತ್ರಿ-ಮಂಡಳದಲ್ಲಿ ಸಹಕಾರ ಮಂತ್ರಿ ಎಂದು ನೇಮಕವಾಗುತ್ತಾರೆ. ಈ ಭಾಗದಲ್ಲಿ ಸ್ಥಾಪಿತವಾಗಿದ್ದ ಸಹಕಾರಿ ಸಂಘಗಳನ್ನು ಪುನರ್ಜೀತನಗೊಳಿಸುವುದರ ಜೊತೆಗೆ ಹೊಸ ಸಹಕಾರ ಸಂಘಗಳನ್ನು ಹುಟ್ಟುಹಾಕುತ್ತಾರೆ. ಆ ಮೂಲಕ ಬಡವರಿಗೆ ಕಡಿಮೆ ಬಡ್ಡಿದರದಲ್ಲಿ ಸಾಲ ಮತ್ತು ನೇಕಾರಿಕೆಯಂಥ ವೃತ್ತಿಯನ್ನು ಕೈಗೊಳ್ಳಲು ಸಹಾಯಧನ ಒದಗಿಸುತ್ತಾರೆ. ಹೀಗೆ ಹತ್ತು ಹಲವು ಕಾರ್ಯಕ್ರಮಗಳನ್ನು ಜಾರಿಗೆ ತರುವುದರ ಜೊತೆಗೆ ಈ ಭಾಗದ ಜನತೆಗೆ ಸಹಕಾರಿ ಕ್ಷೇತ್ರದ ಪರಿಚಯ ಮಾಡಿಕೊಟ್ಟಿರುತ್ತಾರೆ. ಸಹಕಾರಿ ತತ್ವದ ಅಡಿಯಲ್ಲಿ ಸಂಕೇಶ್ವರ ಹಾಗೂ ಎಂ. ಕೆ. ಹುಬ್ಬಳ್ಳಿಗಳಲ್ಲಿ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಿದ್ದು ಎಂ. ಪಿ. ಪಾಟೀಲರ ಕಾರ್ಯದಕ್ಷತೆಗೆ ಕನ್ನಡಿ ಹಿಡಿದಂತಿದೆ. ಅಲ್ಲದೆ ಹುಕ್ಕೇರಿಯ ವಿದ್ಯುತಚ್ಛಕ್ತಿ ಸಂಘದ ಸ್ಥಾಪನೆಯಲ್ಲಿಯೂ ಇವರ ಶ್ರಮ ಅಪಾರವಾಗಿರುತ್ತದೆ.

ಒಟ್ಟಿನಲ್ಲಿ ಸಸಿಯಂತಿದ್ದ ಸಹಕಾರ ಕ್ಷೇತ್ರಕ್ಕೆ ತಮ್ಮಿಂದ ಕೈಲಾದಷ್ಟು ನೀರೆರೆದು ಅದನ್ನು ಹೆಮ್ಮರವಾಗಿ ಬೆಳೆಸುವಲ್ಲಿ ಎಂ. ಪಿ. ಪಾಟೀಲರು ಮಾಡಿರುವ ಕಾರ್ಯ ಸಾರ್ಥಕವಾಗಿರುತ್ತದೆ. ಅದಕ್ಕೆ ಸಾಕ್ಷಿ ಅವರು ನಿರ್ಮಿಸಿ ಬೆಳೆಸಿದ ಇಂದಿನ ಸಂಸ್ಥೆಗಳು ಎಂದು ಹೇಳಬಹುದು.

ಈ ಹೊತ್ತಿಗೆ ದೇಶವು ಸ್ವಾತಂತ್ರ್ಯ ಪಡೆಯುವ ತುಡಿತದಲ್ಲಿತ್ತು. ಎಂ. ಪಿ. ಪಾಟೀಲರು ಈ ಸ್ವಾತಂತ್ರ್ಯ ಚಳುವಳಿಯಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಾರೆ. ಬ್ರಿಟೀಷರ ವಿರುದ್ಧ ಹೋರಾಡಿ ಭಾರತಾಂಬೆಯನ್ನು ಬ್ರಿಟೀಷರಿಂದ ಮುಕ್ತಗೊಳಿಸುವಲ್ಲಿ ಇವರು ಮಾಡಿದ ಕಾರ್ಯ ಅದ್ವಿತೀಯವಾಗಿರುತ್ತದೆ. ದೇಶವು

ಸ್ವಾತಂತ್ರ್ಯವಾದ ಬಳಿಕ ಪ್ರಾಂತಗಳ ಆಧಾರದ ಮೇಲೆ ದೇಶವನ್ನು ವಿಭಜನೆ ಮಾಡುತ್ತಾರೆ. ಇದರಿಂದ ಬೆಳಗಾವಿ ಪ್ರದೇಶವು ಕರ್ನಾಟಕದ ಪ್ರಾಂತದಲ್ಲಿ ವಿಲೀನವಾಗುತ್ತದೆ. ಈ ಕಾಲಕ್ಕೆ ಹೊಸ ಸಂವಿಧಾನ ಜಾರಿಗೆ ಬಂದಿದ್ದರಿಂದ ಪ್ರಾಂತವಾರು ಚುನಾವಣೆಗಳು ಘೋಷಣೆಯಾಗುತ್ತವೆ. ಕರ್ನಾಟಕದ ಪ್ರಾಂತಿಯ ಚುನಾವಣೆಗೆ ಬೆಳಗಾವಿ ಭಾಗದಿಂದ ಅಧಿಕೃತ ಅಭ್ಯರ್ಥಿಯಾಗಿ ಎಂ. ಪಿ. ಪಾಟೀಲರು ಸ್ಪರ್ಧಿಸುತ್ತಾರೆ. ಈ ಚುನಾವಣೆಯಲ್ಲಿ ಹೆಚ್ಚಿನ ಮತಗಳನ್ನು ಪಡೆದು ವಿಜಯಿಯಾಗುತ್ತಾರೆ. ಆ ಮೂಲಕ ಮೈಸೂರು ರಾಜ್ಯದ ವಿಧಾನ ಸಭೆಗೆ ಸದಸ್ಯನೆಂದು ಆಯ್ಕೆ ಆಗುತ್ತಾರೆ. ಕಾಂಗ್ರೇಸ ಪಕ್ಷವು ಬಹುಮತ ಪಡೆದು ಎಸ್. ನಿಜಲಿಂಗಪ್ಪನವರ ನೇತ್ರತ್ವದಲ್ಲಿ ಸರಕಾರವನ್ನು ರಚಿಸುತ್ತದೆ. ಎಂ. ಪಿ. ಪಾಟೀಲರು ಮುಂಬಯಿ ಪ್ರಾಂತದ ಪ್ರತಿನಿಧಿಯಾಗಿದ್ದಾಗ ಮಾಡಿದ ಕಾರ್ಯಗಳನ್ನು ಗಮನಿಸಿದ್ದ ನಿಜಲಿಂಗಪ್ಪನವರು ಇವರನ್ನು ತಮ್ಮ ಮಂತ್ರಿಮಂಡಳದಲ್ಲಿ ಕಂದಾಯ ಸಚಿವರೆಂದು ನೇಮಕ ಮಾಡಿಕೊಳ್ಳುತ್ತಾರೆ. ಕಂದಾಯ ಇಲಾಖೆಯಲ್ಲಿ ಹಲವು ಮಸೂದೆಗಳನ್ನು ಜಾರಿಗೆ ತಂದು ಅವುಗಳನ್ನು ಈಡೇರಿಸುವ ಕಾರ್ಯ ಮಾಡುತ್ತಾರೆ. ಜೊತೆಗೆ ರಾಜಕೀಯ ಕಾರ್ಯಗಳ ಒತ್ತಡದ ಮಧ್ಯೆ ಬಿಡುವು ದೊರೆತಾಗ ಸಾಹಿತ್ಯದ ಆಸಕ್ತಿಯನ್ನು ಬೆಳೆಸಿಕೊಂಡು ಕನ್ನಡ, ಮರಾಠಿ ಭಾಷೆಯಲ್ಲಿ ಹಲವಾರು ಲೇಖನಗಳನ್ನು, ಸಣ್ಣ ಕಥೆ, ನಾಟಕದಂತಹ ಸೃಜನ ಸಾಹಿತ್ಯವನ್ನು ನಿರ್ಮಿಸಿರುತ್ತಾರೆ. ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸಿ ಜೈಲುವಾಸ ಅನುಭವಿಸುವ ಸಮಯದಲ್ಲಿ ತಮ್ಮ ಜೀವನದ ಕುರಿತಾದ ಆತ್ಮಕಥೆಯನ್ನು ಬರೆಯುತ್ತಾರೆ.

ರಾಜಕೀಯದಲ್ಲಿ ಸೇವೆ ಸಲ್ಲಿಸುತ್ತಿರುವ ಸಮಯದಲ್ಲಿ ಅನಾರೋಗ್ಯಕ್ಕೆ ತುತ್ತಾಗಿ ರಾಜಕೀಯದಿಂದ ನಿವೃತ್ತಿ ಹೊಂದುತ್ತಾರೆ. ಬೆಳಗಾವಿಗೆ ಬಂದು ಕಿಲ್ಲಾ ಪ್ರದೇಶದಲ್ಲಿ ನೆಲೆಸುತ್ತಾರೆ. ಆರೋಗ್ಯವು ಮತ್ತುಷ್ಟು ಕೈಕೊಟ್ಟಿದ್ದರಿಂದ ದೇಹದ ಸ್ಥಿತಿ ಹದಗೆಟ್ಟು ಎರಡೂ ಕಾಲುಗಳನ್ನು ಕಳೆದುಕೊಳ್ಳುತ್ತಾರೆ. ಈ ಅಮೂಲ್ಯವಾದ ಸಮಯವನ್ನು ವ್ಯಥಾ ಹಾಳುಮಾಡದೇ ಅದನ್ನು ಯಾವುದಾದರೂ ಒಳ್ಳೆಯ ಕಾರ್ಯಕ್ಕೆ ವಿನಿಯೋಗಿಸಿಕೊಳ್ಳಬೇಕೆಂದು ನಿರ್ಧಾರಮಾಡುತ್ತಾರೆ. ಆ ನಿಟ್ಟಿನಲ್ಲಿ ಸಂಶೋಧನಾ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಸ್ನೇಹಿತರ, ಸಂಬಂಧಿಕರ ಮೂಲಕ ಸಂಶೋಧನಾ ಕ್ಷೇತ್ರಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ತರಿಸಿಕೊಂಡು ಅಧ್ಯಯನದಲ್ಲಿ ನಿರತರಾಗುತ್ತಾರೆ. ಬಸವಣ್ಣ ಮತ್ತು ವೀರಶೈವ ಧರ್ಮಗಳ ಕುರಿತಾದ ಅಧ್ಯಯನಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಡುತ್ತಾರೆ. ಆ ಮೂಲಕ ಈಗಾಗಲೇ ನಡೆದಿರುವ ಅಧ್ಯಯನದ ಆಕರಗಳನ್ನು ಆಳವಾಗಿ ಅಭ್ಯಸಿಸುತ್ತಾರೆ. ವೀರಶೈವ ಧರ್ಮ ಹಾಗೂ ಬಸವೇಶ್ವರರ ಕುರಿತಾಗಿ ಮೂರು ಪ್ರಮುಖ ಸಂಶೋಧನಾ

ಕೃತಿಗಳನ್ನು ಹೊರತರುತ್ತಾರೆ. ಅವುಗಳಲ್ಲಿ ಮೊದಲನೆಯದು "ಬಸವೇಶ್ವರ ಜೀವನ ಚರಿತ್ರೆಯ ಮೇಲೆ ಹೊಸ ಬೆಳಕು". ಈ ಕೃತಿಯಲ್ಲಿ ಬಸವಣ್ಣನವರ ಜೀವನದ ಬಗೆಗೆ ಹಿಂದಿನ ಸಂಶೋಧಕರು ನಡೆಸಿದ ಅಧ್ಯಯನಗಳನ್ನು, ಪ್ರಮುಖ ಆಕರಗಳನ್ನು ತೆಗೆದುಕೊಂಡು ಸಂಶೋಧನಾ ಕ್ಷೇತ್ರದ ವ್ಯಾಪ್ತಿಯಲ್ಲಿ ಈ ವಿಷಯವನ್ನು ಚರ್ಚೆಗೊಳಪಡಿಸಿ ಬಸವಣ್ಣನವರ ವ್ಯಕ್ತಿತ್ವಕ್ಕೆ ಮತ್ತು ಅವರ ಜೀವನ ಚರಿತ್ರೆಗೆ ಚಿಂತನೆಯ ಹೊಸ ದಾರಿ ತೋರುತ್ತಾರೆ.

ತಮ್ಮ ಎರಡನೇ ಸಂಶೋಧನಾ ಕೃತಿಯಲ್ಲಿ ಶೈವ ಪಂಥಗಳಾದ ಲಕುಲೀಶ, ಪಾಶುಪತ, ಕಾಳಾಮುಖ ಪಂಥಗಳ ಕುರಿತು ಹೇಳಿರುತ್ತಾರೆ. ಈ ಪಂಥಗಳ ನಿಜಸ್ವರೂಪ, ಇವುಗಳ ಕಾಲಘಟ್ಟ, ಪರಂಪರೆ ಆಚರಣೆಗಳ ಕುರಿತು ಸಮರ್ಪಕವಾದ ವಿವರಣೆ ನೀಡಿರುತ್ತಾರೆ. ಪುರಾಣ, ಐತಿಹ್ಯ, ಇತಿಹಾಸದ ಕೆಲವು ಅಂಶಗಳನ್ನು ತೆಗೆದುಕೊಂಡು ವಿಶ್ಲೇಷಣೆ ಮಾಡಿರುತ್ತಾರೆ. ಈ ಪಂಥಗಳ ಕುರಿತು ಪೂರ್ಣ-ಪ್ರಮಾಣದ ಸಂಶೋಧನೆ ಕೈಗೊಳ್ಳಲು ಎಂ. ಪಿ. ಪಾಟೀಲರ ಈ ಕೃತಿ ಸಂಶೋಧಕರಿಗೆ ಸಹಾಯಕವಾಗಿರುತ್ತದೆ.

ಎಂ. ಪಿ. ಪಾಟೀಲರ ಮೂರನೆಯ ಸಂಶೋಧನಾ ಕೃತಿ "ವೀರಶೈವ ಧರ್ಮ ಪ್ರವರ್ತಕ ವೀರಭದ್ರ ದೇವರು ದಕ್ಷ ಯಜ್ಞ ಸಂಹಾರಕ ವೀರಭದ್ರನಲ್ಲ" ವೀರಭದ್ರ ದೇವರ ಕುರಿತು ಪುರಾಣಗಳ ಹಿನ್ನೆಲೆಯಲ್ಲಿ ಕಟ್ಟಿರುವ ಕಥೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿರುತ್ತಾರೆ. ವೀರಭದ್ರ ದೇವರು ಎನ್ನುವ ವ್ಯಕ್ತಿ ಯಜುರ್ವೇದ ಕಾಲಕ್ಕೆ ಹುಟ್ಟಿ ಶೈವ ಸಂತತಿಯನ್ನು ಮತ್ತು ವೀರಶೈವ ಧರ್ಮವನ್ನು ಬೆಳಗಿದ ದಾರ್ಶನಿಕ ವ್ಯಕ್ತಿಯಾಗಿದ್ದಾನೆ. ಇವರು ದಕ್ಷನ ಯಜ್ಞವನ್ನು ನಾಶ ಮಾಡಿರುವದಿಲ್ಲ. ಇವರು ವೀರಶೈವ ಧರ್ಮದ ಏಳ್ಗೆಗಾಗಿ ದುಡಿದ ದೇವತಾ ಪುರುಷ. ಇವರೊಬ್ಬ ಶೈವ ಪರಂಪರೆಯಲ್ಲಿ ಆಗಿಹೋದ ಶ್ರೇಷ್ಠ ಶಿವಯೋಗಿಯೆಂಬುದನ್ನು ಹಲವು ಸಾಕ್ಷ್ಯಾಧಾರಗಳ ಮೂಲಕ ಸಾಧಿಸಿದ್ದಾರೆ. ಜೊತೆಗೆ ವೀರಶೈವ ಧರ್ಮದ ಹಿನ್ನಲೆ ಈ ಧರ್ಮ ಉಗಮಕ್ಕೆ ಕಾರಣಗಳೇನು? ಇದರ ಮೂಲ ಪುರುಷರು ಯಾರು? ಮುಂತಾದ ಮಹತ್ವದ ವಿಚಾರಗಳನ್ನು ಈ ಕೃತಿಯಲ್ಲಿ ಚರ್ಚಿಸಿರುತ್ತಾರೆ.

ಎಂ. ಪಿ. ಪಾಟೀಲರು ರಚಿಸಿರುವ ಈ ಕೃತಿಗಳು ಸಂಶೋಧಕ ವರ್ಗದಲ್ಲಿ ಮೆಚ್ಚುಗೆಯನ್ನು ಪಡೆದುಕೊಂಡು ಸಂಶೋಧನಾ ಕ್ಷೇತ್ರವನ್ನು ಶ್ರೀಮಂತ-ಗೊಳಿಸಿರುತ್ತವೆ. ಹೀಗೆ ಸಾಹಿತ್ಯ ಮತ್ತು ಸಂಶೋಧನೆಯ ಕ್ಷೇತ್ರದಲ್ಲಿ ವಿಶಿಷ್ಟ ಸೇವೆ ಸಲ್ಲಿಸಿದ ಎಂ. ಪಿ. ಪಾಟೀಲರು ಸತ್ವಶೀಲ ಸಾಹಿತ್ಯ ಮತ್ತು ಸಂಶೋಧನಾ ಕೃತಿಗಳನ್ನು ರಚಿಸುವದರ ಮೂಲಕ ಸಮಕಾಲೀನ ಶ್ರೇಷ್ಠ ಸಂಶೋಧಕರ ಸಾಲಿಗೆ ಸೇರುವರು. ಉತ್ತಮ ಸಂಶೋಧನಾ ಕೃತಿಗಳನ್ನು ಹಾಗೂ ಸಾಹಿತ್ಯವನ್ನು ರಚಿಸಿದ

ಎಂ. ಪಿ. ಪಾಟೀಲರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸ್ಥಾನವನ್ನು ಪಡೆದುಕೊಂಡಿದ್ದಾರೆ.

ಇತಿಹಾಸದ ಪುಟಗಳನ್ನು ತೆಗೆದು ನೋಡಿದಾಗ ಸಮಾಜಕ್ಕಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟಂತಹ ವ್ಯಕ್ತಿಗಳನ್ನು ನಮ್ಮ ಸಮಾಜವು ಗೌರವಿಸಿದ್ದು ವೇದ್ಯವಾಗುತ್ತದೆ. ಎಂ. ಪಿ. ಪಾಟೀಲರು ಈ ಮಾತಿಗೆ ಹೊರತಾಗಿರುವದಿಲ್ಲ. ಆ ಕಾಲದಲ್ಲಿ ಮೂರುಬಾರಿ ಸಚಿವರಾಗಿ, ಸ್ವಾತಂತ್ರ್ಯ ಹೋರಾಟಗಾರರಾಗಿ, ಸಾಹಿತಿಸಂಶೋಧಕರೆಂದು ಪ್ರಸಿದ್ಧಿ ಪಡೆದಿದ್ದರೂ ಕೂಡಾ ಇವರ ಜೀವನ ಚರಿತ್ರೆ ಕುರಿತು ಅಧ್ಯಯನಗಳು ನಡೆದಿದ್ದು ಬಹಳ ವಿರಳ. ಇಂಥ ವ್ಯಕ್ತಿಗಳ ಬಗೆಗೆ ಪೂರ್ಣಪ್ರಮಾಣದಲ್ಲಿ ಅಧ್ಯಯನಗಳು ನಡೆಯಬೇಕಾಗಿರುವುದನ್ನು ಮನಗಂಡ, ಹೆಸರಾಂತ ವಿಮರ್ಶಕರು, ಸಂಶೋಧಕರಾದ ಡಾ. ಗುರುಪಾದ ಎಸ್. ಮರಿಗುದ್ದಿ ಅವರು ಎಂ. ಪಿ. ಪಾಟೀಲರ ಜೀವನ ಸಾಧನೆಗೆ ಸಂಬಂಧಿಸಿದ ವಿಷಯವನ್ನು ಸಮಗ್ರವಾಗಿ ಹುಡುಕಿ ಪುಸ್ತಕ ರೂಪದಲ್ಲಿ ಪ್ರಕಟಿಸಿರುತ್ತಾರೆ.

ಆರಂಭದಿಂದಲೂ ಕ್ರಿಯಾಶೀಲವಾದ ಮತ್ತು ಪ್ರಯೋಗಶೀಲ ಜೀವನ ನಡೆಸಿದ ಎಂ. ಪಿ. ಪಾಟೀಲರು ಬದುಕಿಗೆ ಒಂದು ಅರ್ಥಪೂರ್ಣವಾದ ಬೆಲೆಯನ್ನು ಕೊಟ್ಟಿರುತ್ತಾರೆ.

ಪ್ರಸ್ತುತ ನಿಬಂಧದಲ್ಲಿ ಅವರ ಸೃಜನಶೀಲ ವ್ಯಕ್ತಿತ್ವದ ಕುರಿತು ಹಲವು ಆಯಾಮಗಳನ್ನು ಅರಿಯಲು ಯತ್ನಿಸಲಾಗಿದೆ. ಜೊತೆಗೆ ಅವರ ಸಂಶೋಧನೆಗಳ ಫಲಿತಗಳನ್ನು ವಿಮರ್ಶೆಗೆ ಒಳಪಡಿಸಲಾಗಿದೆ.

## ಅನುಬಂಧ ೧



ಧರ್ಮ ಪತ್ನಿ ಲಕ್ಷ್ಮೀಬಾಯಿ ಮತ್ತು ಮಗಳು ಸುಶೀಲಮ್ಮನ ಜೊತೆಗೆ ಶ್ರೀ ಎಂ. ಪಿ. ಪಾಟೀಲರು



ಡಾ. ಗೌರಿ, ಶ್ರೀಮತಿ ಸುಶೀಲಾ (ಅಳಿಯ ಮಗಳು) ದಂಪತಿಗಳೊಂದಿಗೆ ಶ್ರೀ ಎಂ. ಪಿ. ಪಾಟೀಲರು



ಧಾರವಾಡ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಡಾ. ಎಸ್. ರಾಧಾಕೃಷ್ಣನ ಅವರೊಂದಿಗೆ ಶ್ರೀ ಎಂ. ಪಿ. ಪಾಟೀಲರು



ಶ್ರೀ ಎಂ. ಪಿ. ಅವರ ಕುಟುಂಬವರ್ಗದ ಅಪರೂಪದ ಭಾವಚಿತ್ರ



ಮುಂಬಯಿ ಪ್ರಾಂತದ ಮುಖ್ಯಮಂತ್ರಿಗಳಾದ ಶ್ರೀ ಜಿ. ಜಿ. ಖೇರ ಅವರೊಂದಿಗೆ ಶ್ರೀ ಎಂ. ಪಿ. ಪಾಟೀಲರ ಮಾತುಕತೆ



ಮುಂಬಯಿ ರಾಜ್ಯದ ಶ್ರೀ ಮುರಾರ್ಜಿ ದೇಸಾಯಿ ಮಂತ್ರಿಮಂಡಳ ಎರಡನೆಯವರು ಶ್ರೀ ಎಂ. ಪಿ. ಪಾಟೀಲರು



ಮುಂಬಯಿಲ್ಲಿಯ ಸತ್ಕಾರಕೂಟವೊಂದರಲ್ಲಿ ಶ್ರೀ ರಂಗನಾಥ ದಿವಾಕರ ಹಾಗೂ ಶ್ರೀ ಚನ್ನಬಸಪ್ಪಾ ಅಂಬಲಿ ಅವರ ಜೊತೆಯಲ್ಲಿ ಶ್ರೀ ಎಂ. ಪಿ. ಪಾಟೀಲರು



ಧಾರವಾಡ ಜಿಲ್ಲೆಯ ಪ್ರವಾಸದ ಸಂದರ್ಭದಲ್ಲಿ ಶ್ರೀ ಹಳ್ಳಿಕೇರಿ ಗುದ್ಲೆಪ್ಪಾ ಶ್ರೀ ಎಚ್. ಎಫ್. ಕಟ್ಟಿಮನಿ ಹಾಗೂ ಇತರರೊಡನೆ ಶ್ರೀ ಎಂ. ಪಿ. ಪಾಟೀಲರು



ಮುಂಬಯಿಯಲ್ಲಿ ಸತ್ಕಾರಕೂಟದಲ್ಲಿ ಶ್ರೀ ರಂಗನಾಥ ದಿವಾಕರ, ಶ್ರೀ ಬಿ. ಡಿ. ಜತ್ತಿ, ಹಾಗೂ ಶ್ರೀ ಚನ್ನಬಸಪ್ಪಾ ಅಂಬಲಿಯವರ ಜೊತೆಯಲ್ಲಿ ಎಂ. ಪಿ. ಅವರು



ಶ್ರೀ ಎಂ. ಪಿ. ಪಾಟೀಲ ಅವರ ನಿವಾಸ, ಕೋಟೆ, ಬೆಳಗಾವಿ.
(ಇಲ್ಲಿಯೇ ಅವರ ಬಹುಪಾಲು ಬರವಣಿಗೆ ನಡೆದಿದ್ದು ಹಾಗೂ ಅವರ ಕೊನೆಯ ದಿನಗಳನ್ನು ಕಳೆದಿದ್ದು.

## ಅನುಬಂಧ ೩

## ಎಂ. ಪಿ. ಪಾಟೀಲರ ಕೃತಿಗಳು

೧. ಬಸವೇಶ್ವರರ ಚರಿತ್ರೆಯ ಮೇಲೆ ಹೊಸ ಬೆಳಕು (೧೯೬೬)

೨. ಲಾಕುಳ ಶೈವ (ಲಕುಲೀಶ ಪಾಶುಪಥ) ಅಥವಾ ಕಾಳಾಮುಖ ಶೈವ ಪಂಥದ ನಿಜ ಸ್ವರೂಪ (೧೯೭೨)

೩. ವೀರಶೈವ (ಲಿಂಗಾಯತ) ಲೇಖ ಸಂಗ್ರಹ (ಮರಾಠಿ-೧೯೭೨)

೪. ವೀರಶೈವ ಧರ್ಮ ಪ್ರವರ್ತಕ ವೀರಭದ್ರದೇವರು ದಕ್ಷ ಯಜ್ಞ ಸಂಹಾರಕ ವೀರಭದ್ರನಲ್ಲ (೧೯೭೫)

೫. ವೀರಶೈವ ಧರ್ಮಾಮೃತ (ಮರಾಠಿ-೧೯೮೨)

೬. ನನ್ನ ಜೀವನ ಚರಿತ್ರೆ (ಅಪ್ರಕಟಿತ)

## ಅನುಬಂಧ ೪

## ಎಂ. ಪಿ. ಪಾಟೀಲರ ಜೀವನದ ಪ್ರಮುಖ ಘಟ್ಟಗಳು

೧೯೦೧ ಸಂಕೇಶ್ವರದಲ್ಲಿ ಜನನ
೧೯೧೪ ಸೌ. ಲಕ್ಷ್ಮೀಬಾಯಿಯವರೊಂದಿಗೆ ವಿವಾಹ
೧೯೧೮ ತಂದೆ-ತಾಯಿಗಳಿಬ್ಬರೂ ಪ್ಲೇಗ ರೋಗಕ್ಕೆ ಬಲಿ
೧೯೨೨ ಪುಣೆ ಕಾಲೇಜಿನಿಂದ ಬಿ.ಎ. ವಿದ್ಯಾಭ್ಯಾಸ
೧೯೨೪ ಮುಂಬಯಿಂದ ಕಾನೂನು ಪದವಿ ಪೂರ್ಣ
೧೯೨೪ ಹುಕ್ಕೇರಿಯಲ್ಲಿ ವಕೀಲಿ ವೃತ್ತಿ ಪ್ರಾರಂಭ
೧೯೨೬ ಇಂಡಿಯನ್ ಟೇರಿಟೋರಿಯಲ್ ಆರ್ಮಿ ತರಬೇತಿ
೧೯೩೦ ರಾಷ್ಟ್ರೀಯ ಆಂದೋಲನದಲ್ಲಿ ಭಾಗಿ, ಜೈಲು ವಾಸ
೧೯೩೩ ಸ್ವಾತಂತ್ರ್ಯ ಹೋರಾಟ, ಹಿಂಡಲಗಾ ಜೈಲು ವಾಸ
೧೯೩೭ ಮುಂಬಯಿ ಪ್ರಾಂತಿಯ ಪರಿಷತ್ತಿಗೆ ಚುನಾವಣೆಗೆ ಆಯ್ಕೆ, ಸಂಸತ್ ಕಾರ್ಯದರ್ಶಿಯಾಗಿ ಜವಾಬ್ದಾರಿ
೧೯೪೨ ಚಲೇಜಾವ ಚಳುವಳಿಯಲ್ಲಿ ಭಾಗಿ, ನಾಸಿಕದಲ್ಲಿ ಸೆರೆಮನೆ ವಾಸ
೧೯೪೬ ಮುಂಬಯಿ ವಿಧಾನ ಸಭೆಗಾಗಿ ನಡೆದ ಚುನಾವಣೆಯಲ್ಲಿ ಗೆದ್ದು ಬಿ.ಜಿ. ಖೇರ ಸಂಪುಟದಲ್ಲಿ ಕೃಷಿ ಮತ್ತು ಅರಣ್ಯ ಸಚಿವರಾದದ್ದು
೧೯೪೭ ಧಾರವಾಡದಲ್ಲಿ ಕೃಷಿ ಕಾಲೇಜು ಸ್ಥಾಪನೆ
೧೯೫೦ ಸಾರ್ವತ್ರಿಕ ಚುನಾವಣೆಯಲ್ಲಿ ಮರು ಆಯ್ಕೆ, ಮುರಾರ್ಜಿ ದೇಸಾಯಿ ಸಂಪುಟದಲ್ಲಿ ಸಹಕಾರ ಮತ್ತು ಸ್ಥಾನಿಕ ಸಂಸ್ಥೆಗಳ ಸಚಿವರಾಗಿದ್ದು
೧೯೫೪ ಮುಂಬಯಿಯಲ್ಲಿ ಅಖಿಲ ಭಾರತ ವೀರಶೈವ ಸಂಘ ಸ್ಥಾಪನೆ, ಅದರ ಅಧ್ಯಕ್ಷರಾದದ್ದು
೧೯೫೫ ಮುಂಬಯಿಯಲ್ಲಿ ವೀರಶೈವ ಪತ್ರಿಕೆಯ ಸಂಸ್ಥಾಪಕ ಸಂಪಾದಕರಾಗಿ ಕಾರ್ಯ
೧೯೫೬ ಮೈಸೂರು ರಾಜ್ಯದಲ್ಲಿ ಎಸ್. ನಿಜಲಿಂಗಪ್ಪನವರ ಸಂಪುಟದಲ್ಲಿ ಕಂದಾಯ ಸಚಿವರು
೧೯೫೮ ಅನಾರೋಗ್ಯದ ನಿಮಿತ್ತ ರಾಜಕೀಯ ಜೀವನದಿಂದ ನಿವೃತ್ತಿ
೧೯೬೬ ಶ್ರೀ ಬಸವೇಶ್ವರರ ಚರಿತ್ರೆಯ ಮೇಲೆ ಹೊಸ ಬೆಳಕು, ಸಂಶೋಧನಾ ಕೃತಿಯ ಪ್ರಕಟಣೆ
೧೯೬೭ ಬೆಳಗಾವಿಯಲ್ಲಿ ಕನ್ನಡ ಜ್ಞಾನ ಪ್ರಸಾದ ಮಾಸಿಕದ ಸಂಸ್ಥಾಪಕ, ಸಂಪಾದಕರು
೧೯೭೨ ಲಾಕೂಳ ಶೈವ (ಲಕುಲೀಶ ಪಾಶುಪಥ) ಅಥವಾ ಕಾಳಾಮುಖ ಶೈವ ಪಂತದ ನಿಜ ಸ್ವರೂಪ, ಸಂಶೋಧನಾ ಕೃತಿಯ ಪ್ರಕಟಣೆ
೧೯೭೫ ವೀರಶೈವ ಧರ್ಮ ಪ್ರವರ್ತಕ ವೀರಭದ್ರ ದೇವರು ದಕ್ಷ ಯಜ್ಞ ಸಂಹಾರಕ ವೀರಭದ್ರನಲ್ಲ, ಸಂಶೋಧನಾ ಕೃತಿಯ ಪ್ರಕಟಣೆ
೧೯೭೬ ಬೆಳಗಾವಿಯಲ್ಲಿ ಸಾರ್ವಜನಿಕರು ಏರ್ಪಡಿಸಿದ ಅದ್ದೂರಿ ಅಮೃತ ಮಹೋತ್ಸವ ಸಮಾರಂಭ ಮತ್ತು ಸನ್ಮಾನ
೧೯೭೭ ಲಿಂಗೈಕ್ಯರಾದುದ್ದು
೧೯೮೨ ಮರಾಠಿ ಸಂಶೋಧನಾ ಲೇಖನಗಳ ಸಂಗ್ರಹ, ಧರ್ಮಾಮೃತ ಮರಣೋತ್ತರವಾಗಿ ಪ್ರಕಟಣೆ
೨೦೦೨ ಸಂಕೇಶ್ವರದಲ್ಲಿ ಅದ್ದೂರಿ ಜನ್ಮ ಶತಮಾನೋತ್ಸವ ಆಚರಣೆ, ಸಮಗ್ರ ಸಂಶೋಧನಾ ಸಂಪುಟದ ಪ್ರಕಟಣೆ

## ಅನುಬಂಧ ೫

# ಶ್ರೀ. ಎಂ. ಪಿ. ಪಾಟೀಲರ ವಂಶ ವೃಕ್ಷ



ಅನುಬಂಧ-೬

## ಗ್ರಂಥ ಋಣ

೧. ಅಗ್ನಿಯ ರೆಕ್ಕೆಗಳು : (ಎ.ಪಿ ಜೆ. ಅಬ್ದುಲಕಲಾಂ ಅವರ ಆತ್ಮ ಕಥನ), ಕನ್ನಡಕ್ಕೆ-ಜಯಪ್ರಕಾಶ ಮತ್ತೂರ; ಪ್ರಕಟಣೆ ೨೦೦೮.
೨. ಎಂ. ಪಿ. ಪಾಟೀಲರು : ಆರ್. ಎಸ್. ಪಾಟೀಲ, ಡಿ. ಎನ್. ಹುಕ್ಕೇರಿ, ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯಮಠ ಗದಗ, ೧೯೮೧.
೩. ಎಂ. ಪಿ. ಪಾಟೀಲ್ : ಡಾ. ಗುರುಪಾದ ಎಸ್. ಮರಿಗುದ್ದಿ, ಪ್ರತಿಭಾವಂತ ಸಂಸದಿಯಪಟು ಪುಸ್ತಕ ಮಾಲಿಕೆ. ಗ್ರಂಥಾಲಯ ಸಮಿತಿ ಕರ್ನಾಟಕ ವಿಧಾನ ಮಂಡಲ ವಿಧಾನಸೌಧ ಬೆಂಗಳೂರು, ೨೦೦೮.
೪. ಕನ್ನಡ ಅಭಿಜಾತ ಸಾಹಿತ್ಯ : ಡಾ. ಟಿ. ವ್ಹಿ. ವೆಂಕಟಾಚಲಶಾಸ್ತ್ರಿ, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೨೦೦೯.
೫. ಕಥೆ ಮತ್ತು ಹಾಡು : ಡಾ. ಕರಿಗೌಡ ಬೀಚನಹಳ್ಳಿ, ಪ್ರಸಾರಾಂಗ ಕನ್ನಡ ವಿ. ವಿ. ಹಂಪಿ, ೨೦೦೩.
೬. ಕನ್ನಡ ಸಾಹಿತ್ಯ ಕೋಶ : ರಾಜಪ್ಪಾ ದಳವಾಯಿ, ಜ್ಞಾನ ಭಾರತಿ ಪ್ರಕಾಶನ ಬೆಂಗಳೂರು ವಿ. ವಿ. ಬೆಂಗಳೂರು ೨೦೦೩.
೭. ಕಾಳಾಮುಖರು ಮತ್ತು ಕಾಪಾಲಿಕರು : ಇಂಗ್ಲೀಷ ಮೂಲ ಡೇವಿಡ್ ಎನ್. ಲಾರೆಂಜನ್, ಕನ್ನಡಕ್ಕೆ ವಿರೂಪಾಕ್ಷ ಕುಲಕರ್ಣಿ, ಎನ್. ತಿಪ್ಪೇಸ್ವಾಮಿ. ಕನ್ನಡ ಪುಸ್ತಕ ಪ್ರಾಧಿಕಾರ ಕನ್ನಡ ಭವನ ಬೆಂಗಳೂರು, ೨೦೦೩.
೮. ಗಡಿನುಡಿ : ನೀಲಗಂಗಾ, ಅಮೃತ ಪ್ರಕಾಶನ ಬೆಳಗಾವಿ, ೨೦೦೭.
೯. ಜನಪದ ಸಾಹಿತ್ಯ ಭಾಷೆ : ಡಾ. ಎಸ್. ಎಸ್. ಅಂಗಡಿ, ವಿಕಾಸ ಪ್ರಕಾಶನ ಶೋಧನ, ಶಿಕ್ಷಕರ ಬಡಾವಣೆ ಎಂ. ಪಿ ಪ್ರಕಾಶ ನಗರ ಹೊಸಪೇಟೆ ೨೦೦೮.
೧೦. ನಾಥ ಸಂಪ್ರದಾಯದ ಇತಿಹಾಸ, ಚಂದ್ರಕಾಂತ ಪೋಕಳೆ, ಅಲ್ಲಮಪ್ರಭು ಜನಕಲ್ಯಾಣ ಸಂಸ್ಥೆ, ಸಿದ್ಧಸಂಸ್ಥಾನಮಠ ಚಿಂಚಣಿ, ೨೦೦೭.
೧೧. ಬಸವೇಶ್ವರರು : ಎಂ. ಚಿದಾನಂದಮೂರ್ತಿ, ನಿರ್ದೇಶಕರು ನ್ಯಾಶನಲ್ ಬುಕ್ ಟ್ರಸ್ಟ್, ಇಂಡಿಯಾ ಎ೫ ಗ್ರೀನ್ ಪಾರ್ಕ ಹೊಸದೆಹಲಿ ೧೯೯೧.
೧೨. ಭಾರತದ ಸಂವಿಧಾನ; ಪ್ರೊ. ಎನ್. ಬಿ. ಪಾಟೀಲ,ಅರುಣ ಪ್ರಕಾಶನ ಬಾಗಲಕೋಟ, ಪ್ರಕಟಣೆ ಜೂನ್ ೨೦೦೧.

೧೩. ಭೂಮವಿಸ್ತಾರ : (ಶ್ರೀ ಬಸಗೌಡ ಅ. ಪಾಟೀಲ ಅಮ್ಮಿನಭಾವಿ ಅಭಿನಂದನಾ ಗ್ರಂಥ) ಸಂ-ಡಾ. ಜಿ. ಎಸ್. ಮರಿಗುದ್ದಿ, ಡಾ. ಎಂ. ಬಿ. ಹೂಗಾರ, ಡಾ.ವ್ಹಿ ಎಸ್ ಮಾಳಿ, ಪ್ರಕಟಣೆ ೨೦೦೪.

೧೪. ಬೆಳಗಾವಿ ಜಿಲ್ಲೆಯ ವಿದ್ವತ ಪರಂಪರೆ : ಲಿಂಗಾಯತ ಅಧ್ಯಯನ ಆಕಾಡೆಮಿ ನಾಗನೂರು ರುದ್ರಾಕ್ಷಿಮಠ ಬೆಳಗಾವಿ ಸಂ. ಡಾ. ಗುರುಪಾದ ಎಸ್. ಮರಿಗುದ್ದಿ ಪ್ರಕಟಣೆ ೨೦೦೪.

೧೫. ಬೆಳಗಾವಿ ಭಾಗ್ಯ : ಪ್ರಧಾನ ಸಂಪಾದಕರು ಡಾ. ಬಸವರಾಜ ಜಗಜಂಪಿ; ಸಂಪಾದಕರು ಡಾ ರಾಮಕೃಷ್ಣ ಮರಾಠೆ, ಶಿರಿಷ ಜೋಷಿ.

೧೬. ಮಹಾ ಜಂಗಮ; ಡಾ. ಜಿ. ಕೆ. ಹಿರೇಮಠ, ಅನಿಮಿಷ ಪ್ರಕಾಶನ ಶ್ರೀಚರಂತಿಮಠ ಬಾಗಲಕೋಟ ಪ್ರಕಟಣೆ-೨೦೧೦.

೧೭. ವಚನ ಕಾರಂಜಿ-ವೀರಶೈವ ಗ್ರಂಥಮಾಲೆ : ೧ ಶ್ರೀ ಚಂದ್ರಶೇಖರ ಶಿವಾಚಾರ್ಯ ಸ್ವಾಮಿಗಳು ಹುಕ್ಕೇರಿ, ೨೦೧೧.

೧೮. ವೀರಶೈವ ಅಧ್ಯಯನ ಸಂಸ್ಥೆ, ಜಿ. ಎಂ. ಹೆಗಡೆ, ವೀರಶೈವ ಅಧ್ಯಯನ ಅಕ್ಯಾಡೆಮಿ ನಾಗನೂರು ರುದ್ರಾಕ್ಷಿಮಠ, ಬೆಳಗಾವಿ.

೧೯. ಶೂನ್ಯ ಸಂಪಾದನೆ : ಎಂ. ಚಿದಾನಂದಮೂರ್ತಿ, ಸ್ನೇಹ ಪ್ರಕಾಶನ ವಿಜಯನಗರ, ಬೆಂಗಳೂರು, ೧೯೯೦.

೨೦. ಸಮಗ್ರ ಸಾಹಿತ್ಯ ೧ : ಎಂ. ಪಿ. ಪಾಟೀಲರ ಆತ್ಮಚರಿತ್ರೆ ಮತ್ತು ಲೇಖನಗಳು, ಶ್ರೀ ಅಪ್ಪಣ್ಣಗೌಡ ಪಾಟೀಲ ಮತ್ತು ಶ್ರೀ ಎಂ. ಪಿ. ಪಾಟೀಲ ಜನ್ಮ ಶತಮಾನೋತ್ಸವ ಸಮಿತಿ ಸಂಕೇಶ್ವರ, ೨೦೦೨.

೨೧. ಸಮಗ್ರ ಸಾಹಿತ್ಯ ೨ : ಎಂ. ಪಿ. ಪಾಟೀಲರ ಸಂಶೋಧನೆಗಳು, ಶ್ರೀ ಅಪ್ಪಯ್ಯಗೌಡ ಬಸಗೌಡ ಪಾಟೀಲ, ಅಮ್ಮಿನಭಾವಿ ಟ್ರಸ್ಟ ಅಮ್ಮಿನಭಾವಿ, ೨೦೦೨.

೨೨. ಸಮಗ್ರ ವಚನ ಸಂಪುಟ (ಜನಪ್ರಿಯ ಆವೃತ್ತಿ) : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಬೆಂಗಳೂರು, ೧೯೯೩.

೨೩. ಸಾರ್ಥಕ : ಎಚ್. ಎಸ್. ಭೀಮನಗೌಡರ, ಶ್ರೀ ಅಪ್ಪಣ್ಣಗೌಡ ಪಾಟೀಲ ಮತ್ತು ಶ್ರೀ ಎಂ. ಪಿ. ಪಾಟೀಲ ಜನ್ಮ ಶತಮಾನೋತ್ಸವ ಸವಿತಿ ಸಂಕೇಶ್ವರ, ೨೦೦೨.